# ಮೈಸೂರಿನ ಮುಂದಾಳುಗಳು

ಹತ್ತು ವ್ಯಕ್ತಿ ಚಿತ್ರ

**ಆರ್. ಎಸ್. ಆರಾಧ್ಯ**



ಪ್ರಭಾತ ಸಾಹಿತ್ಯ

**ಮಲ್ಲೇಶ್ವರಂ : ಬೆಂಗಳೂರು.**

ಬೆಲೆ ಎರಡು ರೂಪಾಯಿ

ಈ ಸರ್ವ

ಪ್ರಕಟವಾಗಲಿರುವ ಪುಸ್ತಕಗಳು

**ಖಗೋಳ ಪುರಾಣ — ವಾಸು**

**ರಾಯರ ಕತೆಗಳು — ಎ. ಸೂರಪ್ಪ**

**ಲೈಲಾಪತ್ರಗಳು — ಖಾಜಿ ಅಬ್ದುಲ್ ಗಫಾರ್**

**ಸ್ವರಾಜ್ಯಶಾಸ್ತ್ರ — ಆಚಾರ್ಯ ವಿನೋಬಾ**



ಮುದ್ರಕರು

ಇಂಡಿಯನ್ ಪ್ರೆಸ್, ಬೆಂಗಳೂರು

## ಟಿ. ಸಿದ್ದಲಿಂಗಯ್ಯ

ಅದು ಜನರ ಮನಸೆಳೆಯುವ ಮೋಹಕ ವದನವಲ್ಲ. ಗಂಭೀರತೆಯನ್ನು ತೋರಿಸುವ ದಿಟ್ಟತನದ ಮೋರೆಯೂ ಅಲ್ಲ. ಅದರಲ್ಲಿ ಮುಗುಳುನಗೆಯ ಮಿಂಚು ಓಡಾಡುತಲೂ ಇರುವುದಿಲ್ಲ. ಕೋಪ, ಕ್ರೋಧಗಳನ್ನು ಕಾರುವ ಕಿಡಿಗಳೂ ಕಂಡು ಬರುವುದಿಲ್ಲ. ಅದೊಂದು ನೀರವ ಜೀವವ ನಡೆಯಿಸಿದ ಮುಖಮುದ್ರೆ ಇದ್ದಂತೆ. ನಿರಾಡಂಬರ, ಸರಳತೆಗಳು ತಾವಾಗಿಯೇ ಎದ್ದು ಕಾಣುತ್ತವೆ—ಆ ಮುಳ್ಳುಮಚ್ಚೆಯ ಕೋಲುಮುಖದಲ್ಲಿ. ಅದರಲ್ಲಿ ಸಂಕೋಚವಿಲ್ಲ ; ಸೌಜನ್ಯವಿದೆ. ಸಿಡಿಮಿಡಿಯಿಲ್ಲ; ಶಾಂತಿ ಇದೆ. ಅದೊಂದು ನಿರಹಂಕಾರ, ನಿಷ್ಕಪಟತೆಗಳನ್ನು ಸೂಚಿಸುವ ಮುಖಭಂಗಿ; ಬೇಕಾದ ಬಲಿದಾನಕ್ಕೆ ಸಿದ್ಧವಿರುವ ದೃಢಮನಸ್ಸಿನ ವರ್ಚಸ್ಸು. ಕೃತ್ರಿಮತೆಯನ್ನೇ ಅರಿಯದ ಕಣ್ಣುಗಳು. ಅರೆನಿಮಿಷಕ್ಕೊಮ್ಮೆ ತಲೆಯಲ್ಲಾಡಿಸಿಕೊಂಡು ಸದಾ " ಹು, ಹು " ಎನ್ನುತ್ತ ಮಾತನಾಡುತ್ತಿರುವ ಮಹಾವ್ಯಕ್ತಿ.

ಅವರೇ ಮೈಸೂರು ಕಾಂಗ್ರೆಸ್ಸಿನ ದೀಪವನ್ನು ಹೊತ್ತಿಸಿದ ಮಹಾಪುರುಷ ದೊಡ್ಡಬಳ್ಳಾಪುರದ ಟಿ. ಸಿದ್ದಲಿಂಗಯ್ಯನವರು. ಅವರು ಹೊತ್ತಿಸಿದ ದೀಪವು ಇಂದು ದೇಶದ ಪಾಲಿಗೆ ನಂದಾದೀಪವಾಗಿ ಪ್ರಜ್ವಲಿಸುತ್ತಿದೆ. ದೇಶ ಅದಕ್ಕಾಗಿ ಅವರಿಗೆ ಋಣಿಯಾಗಿದೆ. ಮೈಸೂರು ಕಾಂಗ್ರೆಸ್ಸಿನ ಪತಾಕೆಯನ್ನು ತಮ್ಮ ಹೆಗಲಮೇಲೆ ಏರಿಸಿಕೊಂಡು ದೇಶದ ಮೂಲೆ ಮೂಲೆಗೂ ಹೋಗಿ, ಅದರ ಸಂದೇಶವನ್ನು ಬೀರಿ, ಜನತೆಯನ್ನು ಬಡಿದೆಬ್ಬಿಸಿದ ಮಹಾನುಭಾವರಿವರು. ಸಿದ್ದಲಿಂಗಯ್ಯನವರಿಗೆ ಆಬಗ್ಗೆ ಮೊದಲ ಮಣೆ, ಅಗ್ರಪೂಜೆ. ಅವರು ಮಾಡಿದ ತ್ಯಾಗ, ತೋರಿಸಿದ ಮನೋದಾರ್ಢ್ಯ, ಅವರ ಬಲಿದಾನ ಸಾಟಿಯಿಲ್ಲದ್ದು.

### ಮೈಸೂರಿನ ಭಾಗ್ಯವಿಧಾತ

ಮೈಸೂರಿನಲ್ಲಿ ನಿರಂಕುಶಾಧಿಕಾರ ತಾಂಡವವಾಡುತ್ತಿದ್ದ ಕಾಲ. ಉನ್ನತಾಧಿಕಾರಿಯು ಸರ್ಕಾರದ ಸೂತ್ರಗಳನ್ನೆಲ್ಲಾ ತನ್ನ ಕೈಯ್ಯಲ್ಲೇ ಇಟ್ಟು

ಕೊಂಡು ಮೆರೆಯುತ್ತಿದ್ದ ಕಾಲವದು. ಹಳ್ಳಿಗಳನ್ನೆಲ್ಲಾ ಮರೆತು ಪಟ್ಟಣಗಳನ್ನು ಸಿಂಗರಿಸುವ ಕಾರ್ಯ ತಾನೇ ತಾನಾಗಿ ನಡೆಯುತ್ತಿತ್ತು. ಬಡ ಬೋರೆಗೌಡನ ಬಾಳು, ಬದುಕುಗಳ ಕಡೆ ಸರ್ಕಾರ ಹೆಚ್ಚುಗಮನ ಕೊಡುತ್ತಿರಲಿಲ್ಲ. ಕೊಟ್ಟರೂ ಅದು ಅವನ ಸುಲಿಗೆಯ ಕಡೆಗೇ ಹೊರತು, ಅವನ ಬೆಳವಣಿಗೆಯ ಕಡೆಗಲ್ಲ. ಇದನ್ನು ಕೂಗಿ ಹೇಳುವ ಶಕ್ತಿಯುಳ್ಳ ನಾಯಕರು ನಮ್ಮ ನಾಡಿನಲ್ಲಿದ್ದರು. ಆದರೆ ಅವರು ಕೋಮುವಾರು ಭೂತದ ಹಿಡಿತಕ್ಕೆ ಸಿಕ್ಕಿ ತಮ್ಮ ತಮ್ಮಲ್ಲೇ ವೈಮನಸ್ಸಿನ ಹೊಗೆಯನ್ನು ಎಬ್ಬಿಸಿಕೊಂಡಿದ್ದರು. ಪಕ್ಷ ಪ್ರತಿಪಕ್ಷಗಳಾಗಿ ಕಿತ್ತಾಟ ನಡೆಸುತ್ತಿದ್ದರು. ಕೋಮುವಾರು ವಾಸನೆಯಿಲ್ಲದ ಕಾಂಗ್ರೆಸ್ಸಿನಂತಹ ಸಂಸ್ಥೆಯ ಅವಶ್ಯಕತೆ ಆಗ ನಮ್ಮ ದೇಶಕ್ಕೆ ಬೇಕಿತ್ತು. ಆದರೆ ಅದರ ಭಾರವನ್ನು ತಲೆಯಮೇಲೆ ಹೊತ್ತು ಮುಂದೆ ಬಂದುನಿಲ್ಲುವ ಧೀರನೊಬ್ಬನೂ ಇರಲಿಲ್ಲ.

ಕಾಂಗ್ರೆಸ್ಸಿನಂತಹ ರಾಜಕೀಯ ಸಂಸ್ಥೆಯ ನಿರ್ವಹಣಭಾರ ಹೊರುವುದೆಂದರೆ ಹುಲಿಯಬಾಯಿಗೆ ತಲೆಕೊಟ್ಟಂತೆ. ಜೊತೆಗೆ ಕೊರಳು ಕತ್ತರಿಸಲು ಸುತ್ತ ಕತ್ತಿ ಮಸೆಯಲಾಗುತ್ತಿತ್ತು. ಅಂದಿನ ಸರ್ಕಾರ ತನ್ನ ನಿರಂಕುಶಾಧಿಕಾರಕ್ಕೆ ಅಡ್ಡಿ ಬಂದ ವ್ಯಕ್ತಿಗಳನ್ನು ಸುಮ್ಮನೆ ಬಿಡುತ್ತಿರಲಿಲ್ಲ. ಇದನ್ನರಿತೋ ಏನೋ ಜನ ಕಾಂಗ್ರೆಸ್ಸಿನ ಪಕ್ಷ ಹಿಡಿಯಲು ಅಂಜುತ್ತಿದ್ದರು. ಅಂತಹ ವಿಷಮ ಸನ್ನಿವೇಶದಲ್ಲಿ ಕಾಂಗ್ರೆಸ್ಸಿನ ಹೊಣೆಗಾರಿಕೆಯನ್ನು ಹೊರಲು ಮುಂದೆ ಬಂದವರೆಂದರೆ ಮೈಸೂರಿನ ಭಾಗ್ಯ ವಿಧಾತ ಟಿ. ಸಿದ್ದಲಿಂಗಯ್ಯನವರು. ಅವರು ತೋರಿಸಿದ ಎದೆಗಾರಿಕೆ, ಮನೋದಾರ್ಢ್ಯ ಚಿರಸ್ಮರಣೀಯವಾದುವು.

## ವಿದ್ಯಾಭ್ಯಾಸ ಮತ್ತು ಉಕ್ತಿ

ಸಿದ್ದಲಿಂಗಯ್ಯನವರು ಹುಟ್ಟಿದುದು ದೊಡ್ಡಬಳ್ಳಾಪುರದಲ್ಲಿ. ಬಾಲ್ಯದ ಬೆಳವಣಿಗೆಯೆಲ್ಲಾ ಅಲ್ಲೇ ನಡೆಯಿತು. ಮಾಧ್ಯಮಿಕ ವಿದ್ಯಾಭ್ಯಾಸ ಮುಗಿದೊಡನೆ ಪ್ರೌಢಶಾಲೆಗಾಗಿ ಬೆಂಗಳೂರಿಗೆ ಬಂದರು. ಆ ಶಿಕ್ಷಣ ಮುಗಿದ ನಂತರ ಬಿ.ಎ. ಪರೀಕ್ಷೆಗಾಗಿ ಮೈಸೂರಿಗೆ ತೆರಳಿದರು. ವಿದ್ಯಾರ್ಥಿದೆಶೆಯಲ್ಲಿದ್ದಾಗ ಅಂತಹ ಪ್ರತಿಭಾಶಾಲಿಯೇನೂ ಆಗಿರಲಿಲ್ಲ. ಮುಂದೆ

ತಾನೊಬ್ಬ ರಾಷ್ಟ್ರನಾಯಕನಾಗುವೆನೆಂಬ ಕನಸನ್ನು ಅವರು ಕಂಡಿರಲಿಲ್ಲ. ಅದಕ್ಕೆ ಬೇಕಾದ ಯೋಗ್ಯತೆ ಇದೆ ಎಂಬ ಯೋಚನೆಯೂ ಅವರಿಗೆ ಹೊಳೆದಿರಲಿಲ್ಲ.

ನಾಲ್ಕು ಜನ ಹುಡುಗರಂತೆ ತಾನೊಬ್ಬ ಹುಡುಗನೆಂದು ವಿದ್ಯಾರ್ಜನೆ ಮಾಡುತ್ತಿದ್ದರು. ಮೈಸೂರಿನಲ್ಲಿ ಬಿ. ಎ. ಪರೀಕ್ಷೆಯನ್ನು ಮುಗಿಸಿಕೊಂಡು ಬಿ. ಎಲ್. ಪರೀಕ್ಷೆಗಾಗಿ ಮದರಾಸಿಗೆ ಹೊರಟರು. ತರುವಾಯ ತಿರು-ವಾಂಕೂರಿನಲ್ಲಿ ಒಂದುವರ್ಷ ಓದಿ, ಲಾ ಪರೀಕ್ಷೆಗೆ ಕುಳಿತು ಪದವೀಧರರಾದರು. ನಂತರ ವಕೀಲರೆಂಬ ಬೋರ್ಡ್ ಮನೆಯಮುಂದೆ ತಗುಲಿಹಾಕುವುದೊಂದೇ ಸಿದ್ದಲಿಂಗಯ್ಯನವರಿಗೆ ಉಳಿದಿದ್ದುದು. ಸಿದ್ದಲಿಂಗಯ್ಯನವರ ತಂದೆಯವರು ವ್ಯಾಪಾರಸ್ಥರು. ತಾಲೂಕಿನಲ್ಲೆಲ್ಲಾ ಕೀರ್ತಿಪಡೆದಿದ್ದ ಮನೆತನ. ವ್ಯಾಪಾರ ಚೆನ್ನಾಗಿ ನಡೆಯುತ್ತಿತ್ತು. ವಕೀಲಿವೃತ್ತಿ ಮನೆತನಕ್ಕೆ ಸಹಾಯವಾಗುವಂತೆ ಇತರರಿಗೂ ಪ್ರಯೋಜನವಾಗಬಹುದೆಂದು ದೊಡ್ಡಬಳ್ಳಾಪುರದಲ್ಲಿ ೧೯೨೪ ರಲ್ಲಿ ವಕೀಲಿ ವೃತ್ತಿಯನ್ನು ಆರಂಭಿಸಿದರು.

ವಕೀಲಿ ವೃತ್ತಿ ಆರಂಭಿಸಲು ಕೊಂಚ ಹಿಂದುಮುಂದು ನೋಡಿದರೂ ಆರಂಭಿಸಿದ ಮೇಲೆ ವೃತ್ತಿಯನ್ನು ಚೆನ್ನಾಗಿಯೇ ನಡೆಯಿಸಿಕೊಂಡು ಬಂದರು. ವರ್ತಕ ಮನೆತನದಲ್ಲಿ ಹುಟ್ಟಿದ ಯುವಕರು ವಿದ್ಯಾಭ್ಯಾಸಕ್ಕೆ ಕೈಹಚ್ಚುವುದೇ ಕಷ್ಟ. ಕಲಿಯಲು ಮನಸ್ಸು ಮಾಡಿದರೂ ಮುಂದುವರೆಸಲು ಅವಕಾಶವಿರುವುದಿಲ್ಲ. ಮುಂದುವರೆಸಿದರೂ ಸರ್ಕಾರದ ಸೇವಕರಾಗುವುದು ಅಪರೂಪ. ಎಷ್ಟೇ ವಿದ್ಯಾವಂತರಾದರೂ ಅವರು ರಾಜಕೀಯವನ್ನು ಹತ್ತಿರ ಬರಗೊಡುವುದಿಲ್ಲ. ವರ್ತಕ ಮನೆತನದ ಯುವಕನಿಗೂ ರಾಜಕೀಯಕ್ಕೂ ಹಸು ಹುಲಿಯ ಸ್ನೇಹ.

ಆದರೆ ಸಿದ್ದಲಿಂಗಯ್ಯನವರ ವಿಚಾರ ಹಾಗಾಗಲಿಲ್ಲ. ವರ್ತಕ ಮನೆತನದಲ್ಲಿ ಹುಟ್ಟಿ ಪ್ರೌಢ ವಿದ್ಯಾಭ್ಯಾಸಮಾಡಿ ವಕೀಲಿ ವೃತ್ತಿಯನ್ನು ಕೈಗೊಂಡರು. ಜೊತೆಗೆ ರಾಜಕೀಯವೂ ಇವರ ಮನಸ್ಸನ್ನು ಸೆಳೆಯಲು ಆರಂಭಿಸಿತು; ಸಾರ್ವಜನಿಕ ಸೇವಾರಂಗ ಕೈಬೀಸಿ ಕರೆಯಿತು. ಆ

ಕರೆಯನ್ನು ತಡೆಗಟ್ಟಲು ಸಿದ್ದಲಿಂಗಯ್ಯನವರಿಂದ ಸಾಧ್ಯವಾಗಲಿಲ್ಲ; ಮುನ್ನುಗ್ಗಿದರು. ಅದರ ಪರಿಣಾಮವಾಗಿ ೧೯೨೯ ರಲ್ಲಿ ಪ್ರಜಾಪ್ರತಿನಿಧಿ ಸಭೆಗೆ ಸ್ಪರ್ಧಿಸಿ, ಸಭಾಸದಸ್ಯರಾಗಿ ಚುನಾಯಿಸಲ್ಪಟ್ಟರು.

## ಗುಣದಲ್ಲೊಂದು ಕೊರತೆ

ಸಿದ್ದಲಿಂಗಯ್ಯನವರಿಗೆ ಒಣ ಜಂಭ, ಸ್ವಪ್ರತಿಷ್ಠೆಗಳಿಲ್ಲ. ಅವರ ಎದೆ ಬಿಚ್ಚಿ ನೋಡಿದರೂ ಎಳ್ಳಷ್ಟೂ ಕಪಟವಿಲ್ಲ. ಅವರು ನಿಷ್ಕಪಟಿಯಾಗಿರುವಂತೆ ಹಟಮಾರಿತನದಿಂದಲೂ ದೂರವಾಗಿದ್ದಾರೆ. ಕೀಳುಮೇಲೆನ್ನದೆ ಹಿರಿಯಕಿರಿಯ ರೆನ್ನದೆ ಎಲ್ಲರೊಡನೆಯೂ ಸರಸವಾಗಿರುವ ಸಹೃದಯತೆ ಅವರ ವಿಶಿಷ್ಟ ಗುಣ. ಅದಕ್ಕೆ ನಿಯಮವಿಲ್ಲ; ಹಿಡಿತವಿಲ್ಲ; ಭೇದವಿಲ್ಲ. ಮಹಾತ್ಮಾ ಗಾಂಧಿಯವರಲ್ಲಿ ತೋರಿಸುವಷ್ಟೇ ವಿನಯ ನಮ್ರತೆಗಳನ್ನು ತಲೆಹೊಡೆದು ಬಂದು ಜೈಲಿನಲ್ಲಿ ಇರುವವನಿಗೂ, ೧೨ ಸಾರಿ ದರೋಡೆ, ಕಳ್ಳತನಮಾಡಿಬಂದ ಪಂಚರಂಗಿ ಖೈದಿಗೂ ತೋರಿಸುತ್ತಾರೆ. ಸ್ವಾಮಿಗಳನ್ನು ಕಂಡಾಗ ತೋರಿಸುವ ಗೌರವ ವಿಶ್ವಾಸಗಳನ್ನು ಅಂತ್ಯಜರಲ್ಲಿಯೂ ತೋರಿಸುವುದುಂಟು. ಅದು ಅವರ ಪದ್ಧತಿ, ಅವರ ಗುಣದಲ್ಲೊಂದು ಕೊರತೆ.

ಅವರಿದ್ದಕಡೆ ಬಾಲಕ ಬಾಲಕಿಯರ ಸಂದಣಿ ಹೆಚ್ಚು. ಹುಡುಗರತಲೆಯ ಮೇಲೆ ತಮ್ಮ ಗಲ್ಲವನ್ನಿಟ್ಟುಕೊಂಡು ಹರಟೆ ಹೊಡೆಯುತ್ತಿರುತ್ತಾರೆ. ಅನೇಕ ವೇಳೆ ಅವರನ್ನು ತಮ್ಮ ತಲೆಯಮೇಲೇರಿಸಿಕೊಳ್ಳುವುದೂ ಉಂಟು. ಅದು ಅವರ ಹೃದಯ ದೌರ್ಬಲ್ಯ.

## ಅಮೇರಿಕಾ ಜೈಲಿನಲ್ಲಿ

ಸಿದ್ದಲಿಂಗಯ್ಯನವರು ಜಗತ್ತನ್ನೆಲ್ಲಾ ಸುತ್ತಿಬಂದಿದ್ದಾರೆ. ಪಾಶ್ಚಾತ್ಯ ಪೌರಾತ್ಯ ರಾಷ್ಟ್ರಗಳಲ್ಲಿ ಇವರಷ್ಟು ಸುತ್ತಿ ಬಂದಿರುವವರು ಮೈಸೂರಿನ ಮುಂದಾಳುಗಳಲ್ಲಿ ಮತ್ತಿನ್ನಾರೂ ಇಲ್ಲ. ೧೯೩೨ ರಲ್ಲಿ ಪ್ರಪಂಚದ ಪ್ರಮುಖ ರಾಷ್ಟ್ರಗಳನ್ನು ನೋಡಿಕೊಂಡು ಬರುವ ಉದ್ದೇಶದಿಂದ ಪ್ರಯಾಣ ಬೆಳಸಿದರು. ತಮ್ಮ ಪ್ರವಾಸದಲ್ಲಿ ಇಂಗ್ಲೆಂಡ್, ಅಮೆರಿಕಾ, ಚೈನಾ, ಜಪಾನ್, ಫಿಲಿಪೈನ್ಸ್, ಹವಾಯಿ ದ್ವೀಪಗಳು ಮುಂತಾದುವುಗಳನ್ನೆಲ್ಲಾ ಸುತ್ತಿಬಂದಿದ್ದಾರೆ.

ಅಲ್ಲಿನ ಜನರ ನಡವಳಿಕೆ, ಆಚಾರವಿಚಾರಗಳನ್ನು ಚೆನ್ನಾಗಿ ಅರಿತು ಬಂದಿದ್ದಾರೆ. ಅವನ್ನು ಚೆನ್ನಾಗಿ ವಿವರಿಸಬಲ್ಲವರಾಗಿದ್ದಾರೆ. ಲಂಡನ್ ನಗರದಲ್ಲಿ ಇದ್ದಾಗ್ಯೆ ಅಲ್ಲಿನ ಸುಪ್ರಸಿದ್ಧ ಹೈಡ್‌ಪಾರ್ಕಿನಲ್ಲಿ ನಿಂತು ಮೈಸೂರಿನ ಬಗ್ಗೆ, ಭಾರತದಬಗ್ಗೆ, ಬೇಕಾದಷ್ಟು ಭಾಷಣಗಳನ್ನು ಮಾಡಿದ್ದಾರೆ. ಅಮೇರಿಕಾಕ್ಕೆ ಹೋದವೇಳೆ ಇವರಬಳಿ ಇದ್ದ ಪಾಸ್‌ಪೋರ್ಟ್ (ಅನುಮತಿ ಚೀಟಿ) ಸರಿಯಾಗಿಲ್ಲವೆಂದು ಸಿದ್ದಲಿಂಗಯ್ಯನವರನ್ನು ಅಮೇರಿಕಾ ಸರ್ಕಾರದವರು ದಸ್ತಗಿರಿಮಾಡಿ ತಾತ್ಕಾಲಿಕ ಕ್ಯಾಂಪ್ ಜೈಲಿನಲ್ಲಿ ಇಟ್ಟು ಇಲ್ಲಿಗೆ ಪತ್ರಬರೆದರು. ಈ ಸರ್ಕಾರದಿಂದ ಉತ್ತರ ಹೋಗುವವರೆಗೆ ಅಂದರೆ ಸುಮಾರು ೩ ತಿಂಗಳು ಅಲ್ಲೇ ಕ್ಯಾಂಪು-ಜೈಲು ಖೈದಿಯಾಗಿದ್ದರು. ಈಗಲೂ ಸಿದ್ದಲಿಂಗಯ್ಯನವರಿಗೆ ಅಮೆರಿಕಾ, ಇಂಗ್ಲೆಂಡ್ ಮುಂತಾದ ಕಡೆಗಳಲ್ಲಿ ಮಿತ್ರರಿದ್ದಾರೆ. ನ್ಯೂಯಾರ್ಕಿನಲ್ಲಿರುವ ಇಂಡಿಯಾಲೀಗ್ ಅಧ್ಯಕ್ಷರಾದ ಶ್ರೀ ಜೆ. ಜೆ. ಸಿಂಗ್‌ರವರು ಇವರ ಆಪ್ತಮಿತ್ರರಲ್ಲೊಬ್ಬರು. ಇಂದಿಗೂ ಅವರೊಡನೆ ಪತ್ರವ್ಯವಹಾರವನ್ನಿಟ್ಟುಕೊಂಡಿದ್ದಾರೆ.

## ರೈತರು ಮೃಗಗಳಂತಿದ್ದಾರೆ

" ರೈತರಿಗೆ ಕಂದಾಯದ ಬಾಧೆಯಿಂದ ಯಾವ ಬಗೆಯ ರಕ್ಷಣೆಯನ್ನೂ ಸರ್ಕಾರ ಕಲ್ಪಿಸಿಲ್ಲ. ಇದು ಬಹಳ ಅನ್ಯಾಯ. ಯಾವ ಸರ್ಕಾರವೇ ಅಧಿಕಾರದಲ್ಲಿರಲಿ ರೈತನಿಗೆ ಬೇಕಾದುದು ಹೊಟ್ಟೆಗೆ ಹಿಟ್ಟು, ಮೈಗೆ ಬಟ್ಟೆ; ಅದು ನಮ್ಮ ರೈತರಿಗೆ ಲೋಪವಾಗಿದೆ. ಅವರಿಗೆ ದೇವರೇ ಗತಿ. ಅವರ ದುಸ್ಥಿತಿಯನ್ನು ಅರಿತುಕೊಳ್ಳಲು ಒಂದು ಆರ್ಥಿಕ ಪರಿಶೀಲನೆ (ಸರ್ವೆ) ನಡೆಯಿಸಬೇಕು. ಇದರಿಂದ ಸರ್ಕಾರಕ್ಕೂ ಕ್ಷೇಮ, ಪ್ರಜೆಗಳಿಗೂ ಕ್ಷೇಮ. ಮಾದರಿ ಸಂಸ್ಥಾನದ ರೈತರು ಈಗ ಮೃಗಗಳಂತಿದ್ದಾರೆ. ದನಗಳಂತೆ ಬಾಳು ನಡೆಯಿಸುತ್ತಿದ್ದಾರೆ. ಅವರು ವ್ಯವಸಾಯಮಾಡುವುದು ಸರ್ಕಾರಕ್ಕೆ ಕಂದಾಯ ಕೊಡುವುದಕ್ಕಾಗಿ. ರೈತನಿಗಿಂತಜೈಲಿನಲ್ಲಿರುವ ಬಂದಿಯಾದರೂ ಎಷ್ಟೋ ವಾಸಿ. ಅವನಿಗೆ ಸಿಗುವ ಊಟಕೂಡ ಇಂದು ರೈತನಿಗೆ ಸಿಗುತ್ತಿಲ್ಲ. "

ಇದು ೧೯೩೭ ನೇ ಜೂನ್ ತಿಂಗಳಲ್ಲಿ ನಡೆದ ಪ್ರಜಾಪ್ರತಿನಿಧಿ ಸಭೆಯಲ್ಲಿ ಸಿದ್ದಲಿಂಗಯ್ಯನವರು ಮಾಡಿದ ಸಿಂಹ ಘರ್ಜನೆ. ಈ ಕೂಗುಕೇಳಿ ಸರ್ಕಾರ

ನಡುಗಿಹೋಯಿತು. ಆಗಿನ ಕಾಲದಲ್ಲಿ ಇಷ್ಟು ಬಿರುಸಾಗಿ ಮಾತನಾಡು ತ್ತಿದ್ದವರು ಬಹುಮಂದಿ ಇರಲಿಲ್ಲ. ಪ್ರತಿನಿಧಿ ಸಭೆಯಲ್ಲಿ ಈ ರೀತಿ ಕೂಗು ಹಾಕಲು ಪ್ರಾರಂಭಿಸಿದ ಮೇಲೆಯೇ ಮೈಸೂರಿನ ಜನತೆ ಸಿದ್ದಲಿಂಗಯ್ಯ ನವರನ್ನು ಅರಿತುಕೊಳ್ಳಲಾರಂಭಿಸಿದ್ದು. ಸಿದ್ದಲಿಂಗಯ್ಯನವರು ೧೯೨೪ ರಿಂದ ೧೯೩೩ ರ ವರೆಗೆ ಪ್ರಜಾಪ್ರತಿನಿಧಿಸಭಾ ಸದಸ್ಯರಾಗಿದ್ದು ತರುವಾಯ ೧೯೩೭ ರಲ್ಲಿ ನ್ಯಾಯವಿಧಾಯಕ ಸಭೆಗೆ ಕಾಂಗ್ರೆಸ್ಸಿನ ಪರವಾಗಿ ನಿಂತು ಚುನಾಯಿತ ರಾದರು. ಮಲ್ಲೇಶ್ವರದ ನಿರ್ಣಯದಂತೆ ೧೯೩೮ ರಲ್ಲಿ ರಾಜೀನಾಮೆಯಿತ್ತರು. ಮತ್ತೆ ಪ್ರತಿನಿಧಿ ಸಭೆಗಳಿಗೆ ಬರಲಿಲ್ಲ.

ಸಿದ್ದಲಿಂಗಯ್ಯನವರ ಜೀವನದಲ್ಲಿ ಅವರ ವ್ಯಕ್ತಿತ್ವ ಮುಖ್ಯವಲ್ಲ. ಅವರ ಅದ್ಭುತ ಶಕ್ತಿ, ಅಸಮಾನ ಸಾಮರ್ಥ್ಯ, ಅವರು ಮಾಡಿದ ಮಹಾಪ್ರಯತ್ನ, ಪಟ್ಟ ಅವಿಶ್ರಾಂತ ಶ್ರಮ, ಚಿರಸ್ಮರಣೀಯ. ೧೯೩೬-೩೭ ರಲ್ಲಿ ಮೈಸೂರು ಸರ್ಕಾರ ತನ್ನ ಕ್ರೂರ ಶಾಸನಗಳಿಂದ ಜನರ ಸ್ವಾತಂತ್ರ್ಯವನ್ನು ಹರಣ ಮಾಡಿತ್ತು. ಎಲ್ಲೆಲ್ಲೂ ಪ್ರತಿಬಂಧಕಾಜ್ಞೆಗಳು. ಸಭೆಗಳಿಗೆ ಅವಕಾಶವಿಲ್ಲ. ಬಿಟ್ಟ ಬಾಯಿಗೆ ಬೀಗ; ಎದುರಿಸಿದ ಜನಕ್ಕೆ ಜೈಲು—ಈ ರೀತಿ ಜನತೆ ಯನ್ನು ಹೆದರಿಸಿತ್ತು. ಆಗ ತಾನೆ ಸ್ಥಾಪಿತವಾಗಿದ್ದ ಮೈಸೂರು ಕಾಂಗ್ರೆಸ್ ಬೋರ್ಡ್ ಈ ಬಗ್ಗೆ ಕಾರ್ಯಕ್ರಮ ಕೈಗೊಳ್ಳಬೇಕೆಂದು ಮನಸ್ಸುಮಾಡಿತು. ಕೌನ್ಸಿಲ್ ಆಫ್ ಆಕ್ಷನ್ ಒಂದನ್ನು ರಚಿಸಿ ಅದರಲ್ಲಿ ಶ್ರೀಗಳಾದ ಸಿದ್ದ ಲಿಂಗಯ್ಯ, ವೀರಕೇಸರಿ ಮತ್ತು ತಗಡೂರು ಇವರನ್ನು ಸದಸ್ಯರನ್ನಾಗಿ ಮಾಡಲಾಯಿತು. ದೇಶವಲ್ಲೆಲ್ಲಾ ಪ್ರಚಾರಮಾಡಲು ಈ ಮೂರು ಜನರೂ ಪ್ರವಾಸ ಹೊರಟರು. ಹಲವಾರುಕಡೆ ಇವರ ಪ್ರಚಾರವಾದಮೇಲೆ ಮೂರು ಜನರನ್ನೂ ಸರಕಾರ ಒಮ್ಮೆಲೇ ದಸ್ತಗಿರಿಮಾಡಿ ಮೊಖದ್ದಮೆ ಹೂಡಿತು. ಆಗ ಸರ್ಕಾರ ತೋರಿಸಿದ ಬೆದರಿಕೆಗೆ ಇವರು ಕೊಂಚವೂ ಹೆದರಲಿಲ್ಲ. ಮೈಸೂರು ಕಾಂಗ್ರೆಸ್ ಬೋರ್ಡಿಗೆ ಆಗ ಸಿದ್ದಲಿಂಗಯ್ಯನವರೇ ಅಧ್ಯಕ್ಷರು.

## ಹತ್ತಿದಹಾಗೇ–ಇಳಿದಹಾಗೇ

ಇವರ ಗುಣ ಮತ್ತು ತತ್ವಗಳು ಇತರರಿಗೊಂದು ಸಮಸ್ಯೆ. ಅದನ್ನು ಇವರ ಮಿತ್ರರೂ ಕೂಡ ಸರಿಯಾಗಿ ಅರಿತುಕೊಂಡಿಲ್ಲ. ಅರಿತುಕೊಳ್ಳಲಾ

ಗುವುದೂ ಇಲ್ಲ. ಇವರ ಮನಸ್ಸಿನ ಏರುಪೇರುಗಳು ಹತ್ತಿದರೆ ಹತ್ತಿದ ಹಾಗೇ ; ಇಳಿದರೆ ಇಳಿದಹಾಗೇ. ಒಮ್ಮೆ ನಂದಿ ಬೆಟ್ಟಕ್ಕೆ ಏರಿ ಕುಳಿತು ಕೊಳ್ಳುವುದುಂಟು. ಮತ್ತೊಮ್ಮೆ ನೀರಿಲ್ಲದ ಕೊರಕಲು ಬಾವಿಗೆ ಇಳಿಯು ವುದೂ ಉಂಟು. ಧ್ಯೇಯದಲ್ಲಿ ಗುರಿ ಇರಬಹುದು ; ದಾರಿಯಿಲ್ಲ. ಮನಸ್ಸು ಬಂದಂತೆ; ಹುಚ್ಚು ಹೊಳೆಹರಿದಂತೆ. ಜಗತ್ತನ್ನು ಸುತ್ತಿ ಬರಬೇಕೆಂದು ಹೊರಟವರು ಲಂಡನ್ ನಗರದ ಬೀದಿಯಲ್ಲಿ ಪತ್ರಿಕೆಗಳನ್ನು ಮಾರಿ ದುಡ್ಡು ಸಂಪಾದಿಸುತ್ತಿದ್ದರಂತೆ—ಕೈಲಿ ದುಡ್ಡು ಇರಲಿಲ್ಲವೆಂದಲ್ಲ; ಇತ್ತು. ಇದ್ದು ದರ ಜೊತೆಗೆ ಮತ್ತಿಷ್ಟು ಸೇರಿಸೋಣವೆಂದು ಆ ರೀತಿ ಪತ್ರಿಕೆ ಮಾರುತ್ತಿ ದ್ದರೋ ಏನೋ ಬಲ್ಲವರಾರು ?

ಪ್ರಚಾರಕ್ಕಾಗಿ ಪ್ರವಾಸ ಹೊರಟರೆ ಬರಿಗೈಯ್ಯಲ್ಲೇ ಹೊರಡುತ್ತಾರೆ. "ಏನ್ರಿ ಹೀಗೆ ಹೊರಟಿರಿ. ಹಾಸಿಗೆ ಬಟ್ಟೆ ಎಲ್ಲಿ ?" ಅಂದರೆ "ಹಾಸಿಗೆ ಏಕೆ ? ಬಟ್ಟೆಗಳು ಏಕೆ ? ಹೋದಕಡೆಗಳಲ್ಲಿ ಅವರೇ ಕೊಡುತ್ತಾರೆ. ಅವರ ಬಟ್ಟೆಗಳು ಇರುವುದಿಲ್ಲವೇ ? ಅವರ ಹಾಸಿಗೆ ಇರುವುದಿಲ್ಲವೇ ? ಅವೇ ಸಾಕು. ಇಲ್ಲದಿದ್ದರೆ ಬೇಡವೇಬೇಡ" ಎನ್ನುತ್ತಾರೆ. ಅವರು ಮಾಡುವುದೂ ಹಾಗೆಯೇ. ಪ್ರಚಾರ ಕಾರ್ಯಕ್ಕಾಗಿ ಹೊರಟಾಗ ಯಾರದೋ ಬಟ್ಟೆಗಳನ್ನು ಹಾಕಿಕೊಂಡು ಪ್ರವಾಸ ಮಾಡುತ್ತಿದ್ದುದನ್ನು ನಾನು ಕಂಡಿ ದ್ದೇನೆ.

ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದಾಗ ಇವರೇ ಚುನಾಯಿಸಿದ ಕಾರ್ಯ ಕಾರಿ ಸಮಿತಿಯವರು ಒಮ್ಮೆ ಅಖಿಲ ಮೈಸೂರು ಕಾಂಗ್ರೆಸ್ ಸಮಿತಿಯ ಮುಂದೆ ಒಂದು ಅಧಿಕಾರಯುತ ನಿರ್ಣಯ ತಂದರು. ಆ ಬಗ್ಗೆ ತೀವ್ರ ಚರ್ಚೆ ನಡೆಯಿತು. ಅಖಿಲ ಮೈಸೂರು ಕಾಂಗ್ರೆಸ್ ಸಮಿತಿ ಸದಸ್ಯರನೇಕರು ಪ್ರತಿಭಟಿಸಿದರು. ಕೆಲವರು ಕಾರ್ಯಕಾರಿ ಸಮಿತಿಯ ಕಡೆ ನಿಂತರು. ನಿರ್ಣಯವನ್ನು ಓಟುಗಳ ಬಲದಿಂದಲೇ ತೀರ್ಮಾನಿಸಬೇಕಾಗಿ ಬಂತು; ಓಟಿಗೆ ಹಾಕಲಾಯ್ತು. ನಿರ್ಣಯದ ಪರವಾಗಿ ಮತ್ತು ವಿರೋಧವಾಗಿ ಒಂದೇ ಸಮನಾದ ಓಟುಗಳು ಬಂದವು. ಉಳಿದಿದ್ದು ಅಧ್ಯಕ್ಷರ ಓಟು. ಅದು ನ್ಯಾಯವಾಗಿ ಅವರು ಚುನಾಯಿಸಿದ ಕಾರ್ಯಕಾರಿ

ಸಮಿತಿಯ ಪರವಾಗಿಯೇ ಅಂದರೆ ನಿರ್ಣಯದ ಪರವಾಗಿಯೇ ಕೊಡಬೇಕಾದ್ದಲ್ಲವೆ? ಆದರೆ ಸಿದ್ದಲಿಂಗಯ್ಯನವರು ಎದ್ದುನಿಂತು ಸಭೆಯನ್ನು ಒಮ್ಮೆ ದೀರ್ಘವಾಗಿ ನೋಡಿ ಕಾರ್ಯಕಾರಿ ಸಮಿತಿಗೆ ವಿರೋಧವಾಗಿಯೇ ಓಟು ಮಾಡಿಬಿಟ್ಟರು. ಮುಂದೇನಾಯ್ತೆಂಬುದು ಇಲ್ಲಿ ಬೇಡ. ತಮ್ಮ ನಿರ್ಣಯವನ್ನು ತಾವೇ ವಿರೋಧಿಸುವುದುಂಟೆ? ಕೇಳಿದರೆ ಮನಸ್ಸು ಹಾಗೆ ಬಂತು, ಹಾಗೆ ಮಾಡಿದೆ ಅಂದುಬಿಟ್ಟರು. ಅಂತಹ ವ್ಯಕ್ತಿ ಅವರು.

ಸಿದ್ದಲಿಂಗಯ್ಯನವರ ಜೀವನದಲ್ಲಿ ಇಂತಹ ಏರುಪೇರು ಪ್ರಸಂಗಗಳು ಎಷ್ಟೋ ವೇಳೆ ನಡೆದಿವೆ. ಆದರೆ ಅವರ ತ್ಯಾಗ ಮತ್ತು ದೇಶಕ್ಕೆ ನೆತ್ತರು ಸುರಿಸಲು ಸಿದ್ಧನಿರುವೆನೆಂಬ ಅವರ ಧೈರ್ಯ, ಮನೋದಾರ್ಢ್ಯಗಳು ಅಪ್ರತಿಮವಾದುವು, ಅಸಾಧಾರಣವಾದುವು. ದೇಶದಲ್ಲೊಂದು ವಿಷಮ ಸನ್ನಿವೇಶವೊದಗಿದ ವೇಳೆ ಇವರು ತೋರಿಸಿದ ತ್ಯಾಗ ಅದ್ಭುತವಾದುದು; ಎದೆಯೊಡೆಯುವಂತಹದು. ಶಿವಪುರದಲ್ಲಿ ಕಾಂಗ್ರೆಸ್ ಮಹಾಧಿವೇಶನ; ಅಧ್ಯಕ್ಷಗದ್ದುಗೆಗೆ ಏರಲು ನಿಂತಿದ್ದ ಸಿದ್ದಲಿಂಗಯ್ಯನವರು; ರಾಷ್ಟ್ರಧ್ವಜ ಹಾರಾಡಲು ಅವಕಾಶ ಕೊಡುವುದಿಲ್ಲವೆಂದು ಹಟತೊಟ್ಟಿದ್ದ ಸರ್ಕಾರ; ಶಸ್ತ್ರಸಜ್ಜಿತರಾಗಿ ನಿಂತಿದ್ದ ಪೋಲೀಸರು; ಗುಂಡು ಹಾರಿಸಲು ಸಿದ್ಧವಿದ್ದ ಬಂದೂಕುಗಳು—ಇವುಗಳನ್ನೆಲ್ಲಾ ನೆನಸಿಕೊಂಡರೆ ಈಗಲೂ ಮೈ ಜುಮ್ಮೆನ್ನುತ್ತದೆ!

ಅಂದು ರಕ್ತದ ಕಾಲುವೆ ಹರಿಯಬೇಕಾಗಿತ್ತು. ಹೆಣಗಳ ರಾಶಿ ಬೀಳಬೇಕಾಗಿತ್ತು. ನೆರೆದಿದ್ದವರ ಹೃದಯದಲ್ಲಿ ಕೋಪ, ಭಯ, ಸಂಕಟಗಳು ಉದ್ಭವಿಸಿದ್ದುವು. ಅಂತಹ ವಿಷಮ ಸನ್ನಿವೇಶದಲ್ಲಿ ತಲೆಕೊಡಲು ಸಿದ್ಧನೆಂದು ಮುಂದೆ ಬಂದರು ಸಿದ್ದಲಿಂಗಯ್ಯನವರು. ಅವರ ಧೈರ್ಯ, ಅವರು ಜನರಿಗಿತ್ತ ಸಂದೇಶ, ಪ್ರೋತ್ಸಾಹ ಇವುಗಳನ್ನು ನಾವು ಮರೆಯಲಾದೀತೆ?

## ಹೆಸರು ಮನೆಮಾತಾಗಿದೆ

ಸಿದ್ದಲಿಂಗಯ್ಯನವರು ಹುಟ್ಟಿದ್ದು ವರ್ತಕಮನೆತನದಲ್ಲಿ. ಪಾರಂಗತರಾದದ್ದು ಪಾಶ್ಚಾತ್ಯ ವಿದ್ಯೆಯಲ್ಲಿ. ಬೆಳಕಿಗೆ ಬಂದದ್ದು ಸಾರ್ವಜನಿಕ ರಂಗ

ದಲ್ಲಿ. ಘನತೆಗೆ ಏರಿದ್ದು ಅಧ್ಯಕ್ಷ ಗದ್ದುಗೆಯಲ್ಲಿ. ಯಾರೂ ಇಲ್ಲದವೇಳೆ ಎದೆತಟ್ಟಿ ಮುಂದೆಬಂದುದರ ಪ್ರಭಾವವೋ ಅಥವಾ ಇವರು ತೋರಿಸಿದ ಧೈರ್ಯ, ಸ್ಥೈರ್ಯಗಳ ಶಕ್ತಿಯೋ ಅಂತೂ ಸಿದ್ದಲಿಂಗಯ್ಯನವರ ಹೆಸರು ಮೈಸೂರಿನಲ್ಲಿ ಮನೆಮಾತಾಗಿದೆ. ಮೈಸೂರು ಮುಂದಾಳುಗಳಲ್ಲಿ ಇವರಷ್ಟು ಜನಪ್ರಿಯರಾಗಿರುವವರು ಬೇರೆ ಯಾರೂ ಇಲ್ಲವೆಂದರೆ ತಪ್ಪಲ್ಲ; ಸುಳ್ಳೂ ಅಲ್ಲ. ಹಳ್ಳಿಗರಿಗೆ ಇವರ ಹೆಸರೆಂದರೆ ಅಪಾರ ಭಕ್ತಿ, ಅಸಮಾನ ಗೌರವ. ಎಷ್ಟೋ ಊರುಗಳಲ್ಲಿ ಇವರ ಭಾವಚಿತ್ರವು ಪೂಜಿಸಲ್ಪಡುತ್ತಿರುವುದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಅದು ಅವರ ನಿಸ್ವಾರ್ಥ ಸೇವೆಗೆ ಜನರು ಸಲ್ಲಿಸುತ್ತಿರುವ ಕಾಣಿಕೆ.

ಇವರ ಕೀರ್ತಿಲತೆ ಮೈಸೂರಿನಲ್ಲೇಕೆ ? ಅಖಿಲ ಕರ್ನಾಟಕಕ್ಕೂ ಹಬ್ಬಿ ಪಸರಿಸಿಕೊಂಡಿದೆ. ಉತ್ತರ ಕರ್ಣಾಟಕದ ಜನರಿಗೆ ಸಿದ್ದಲಿಂಗಯ್ಯನವರ ಮೇಲೆ ಅಸಾಧಾರಣ ಅಭಿಮಾನ,ಅಸಾಮಾನ್ಯವಿಶ್ವಾಸ. ಆದ್ದರಿಂದಲೇ ಇವರಿಗೆ ಆಗಾಗ್ಗೆ ಉತ್ತರ ಕರ್ನಾಟಕದಿಂದ ಪ್ರವಾಸಕ್ಕೆ ಕರೆಬರುವುದು. ಇವರ ದಕ್ಷತೆ ಕಂಡು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯು ೧೯೩೯—೪೦ ರಲ್ಲಿ ಇವರನ್ನೇ ಉಪಾಧ್ಯಕ್ಷರನ್ನಾಗಿ ಚುನಾಯಿಸಿಕೊಂಡು ಕೆಲಸ ನಡೆಸಿತು. ಜಮಖಂಡಿ ಸಂಸ್ಥಾನದ ಪ್ರಜಾಪರಿಷತ್ತು ೧೯೪೧ ರಲ್ಲಿ ಮೈಸೂರಿನ ಸಿದ್ದಲಿಂಗಯ್ಯನವರನ್ನು ಅಧ್ಯಕ್ಷರನ್ನಾಗಿ ಆರಿಸಿಕೊಂಡಿತ್ತೆಂದ ಮೇಲೆ ಉತ್ತರ ಕರ್ಣಾಟಕದಲ್ಲಿ ಇವರ ಪ್ರಭಾವ ಎಷ್ಟರಮಟ್ಟಿನದೆಂಬುದನ್ನು ಹೇಳಬೇಕೆ ?

ಸಿದ್ದಲಿಂಗಯ್ಯನವರು ನಾಲ್ಕುಬಾರಿ ಸೆರೆಮನೆಯನ್ನು ಕಂಡಿದ್ದಾರೆ. ೧೯೩೭ ನೇ ಅಕ್ಟೋಬರಿನಲ್ಲಿ ನೇಕ್ಚಾಲ್ ಮೊಕದ್ದಮೆ ಸಂಬಂಧದಲ್ಲಿ ಜಾಮೀನುಕೊಡದೆ ಜೈಲಿನಲ್ಲಿ ಇದ್ದರು; ೧೯೩೮ ರಲ್ಲಿ ನಡೆದ ಶಿವಪುರದ ಮಹಾಧಿವೇಶನದಲ್ಲಿ ಕಾಂಗ್ರೆಸ್ ಬಾವುಟವನ್ನು ಹಾರಿಸಿದ್ದಕ್ಕಾಗಿ ಒಂದು ತಿಂಗಳು ಶಿಕ್ಷೆಯನ್ನು ಅನುಭವಿಸಿದರು; ಮತ್ತೆ ೧೯೩೯ ರಲ್ಲಿ ಸತ್ಯಾಗ್ರಹ ಹೂಡಬೇಕೆಂದು ನಿರ್ಧರಿಸಿದಾಗ ಇವರನ್ನೇ ಪ್ರಥಮ ಸರ್ವಾಧಿಕಾರಿಯನ್ನಾಗಿ ನೇಮಿಸಲಾಯಿತು. ಸೆಪ್ಟಂಬರ್ ಮೊದಲನೆಯ ತಾರೀಖು ಸತ್ಯಾಗ್ರಹ ಆರಂಭ

ಘೋಷಣೆ ಮಾಡಿದರು. ಸರ್ಕಾರ ತಬ್ಬಿಬ್ಬಾಯಿತು. ಇವರು ತುಮಕೂರಿಗೆ ಪ್ರಯಾಣಮಾಡಿ ಅಲ್ಲಿನ ಜಿಲ್ಲಾ ಮ್ಯಾಜಿಸ್ಟ್ರೇಟರ ಆಜ್ಞೆಯನ್ನು ಮುರಿದು ಮೂರು ತಿಂಗಳಶಿಕ್ಷೆಗೆ ಗುರಿಯಾದರು; ತಿರುಗಿ ೧೯೪೩ ನೇ ಜನವರಿ ತಿಂಗಳಲ್ಲಿ ಇಂಡಿಯಾ ರಕ್ಷಣಾ ಕಾನೂನು ಪ್ರಕಾರ ಒಂದೂವರೆ ವರ್ಷ ಕಠಿಣಶಿಕ್ಷೆಗೆ ಗುರಿಯಾಗಿ ಸಂಪೂರ್ಣ ಶಿಕ್ಷೆಯನ್ನು ಅನುಭವಿಸಿ ಹೊರಗೆ ಬಂದರು.

## ಊಟ ನಿದ್ದೆಯಿಲ್ಲದ ದುಡಿತ

ಸಿದ್ದಲಿಂಗಯ್ಯನವರು ಸೆರೆಮನೆಗೆ ಕಿಂಚಿತ್ತೂ ಹೆದರುವ ಜೀವವಲ್ಲ. ಯಾವಾಗಲೂ ಅಲ್ಲೇ ಇರಬಲ್ಲರು. ಹೊರಗಿನ ವಾತಾವರಣದ ಯೋಚನೆ ಯನ್ನೇ ಇಟ್ಟುಕೊಳ್ಳುವುದಿಲ್ಲ. ಅವರ ಸ್ವಭಾವವೇ ಅಂತಹುದು. ಇದ್ದರೆ ಊಟ, ಇಲ್ಲದಿದ್ದರೆ ಬಾಳೆಹಣ್ಣೋ ಪುರಿಯೋ ಕೊಟ್ಟರೆ ಅಷ್ಟೇ ಸಾಕು. ಅದರಲ್ಲೇ ದಿನಗಟ್ಲೆ ಇರಬಲ್ಲರು. ಅದೂ ಇಲ್ಲದಿದ್ದರೆ ಕೈ ಅಲ್ಲಾಡಿಸಿಬಿಡಿ. "ಏಕೆ" ಎನ್ನುವ ಪದ್ಧತಿಯೇ ಇಲ್ಲ. ಕೊಟ್ಟರೆ ಕಾಫಿ ಹನ್ನೆರಡುವೇಳೆ ಕುಡಿಯುತ್ತಾರೆ. ಇಲ್ಲದಿದ್ದರೆ ತಣ್ಣೀರೇಸಾಕು. ಕಾಂಗ್ರೆಸ್ ಕೆಲಸ ವಿದ್ದರೆ ನೀರೂಬೇಡ, ನಿದ್ದೆಯೂಬೇಡ, ಸ್ನಾನವನ್ನಂತೂ ಕೇಳುವುದೇ ಇಲ್ಲ. ಬೆಳಗಿನಿಂದ ರಾತ್ರಿಯವರೆಗೂ ಅವ್ಯಾಹತವಾಗಿ ದುಡಿಯುತ್ತಾರೆ. ಗುಂಡ್ಲು ಪೇಟೆಯಲ್ಲಿರುವಾಗ ಮೊಳಕಾಲ್ಮೂರಿಗೆ ಆಹ್ವಾನಿಸಲಿ, ಮುಳುಬಾಗಿಲಿನಲ್ಲಿರು ವಾಗ ಶೃಂಗೇರಿಗೆ ಕರೆಯಲಿ, ತುಟಿಪಿಟಿಕ್ ಎನ್ನದೆ ಬರುತ್ತಾರೆ. ದಾರಿಯಲ್ಲಿ ಬೇರೆಯವರು ಕಂಡು ನಮ್ಮೂರಿಗೆ ಬಂದು ಭಾಷಣಮಾಡಿ ಎಂದರೆ ಅಲ್ಲೇ ಇಳಿದು ಬಿಡುತ್ತಾರೆ–ಅಂತಹ ಪ್ರಕೃತಿ. ಎಲ್ಲಾದರೇನು ಕಾರ್ಯ ಸಾಗುವು ದೊಂದೇ ಅವರಿಗೆ ಬೇಕಾದದ್ದು. ಅವರದು ಅವಿಶ್ರಾಂತ ನಿಸ್ವಾರ್ಥ ದುಡಿತ– ಪ್ರತಿಫಲಾಪೇಕ್ಷೆಯಿಲ್ಲದೆ ದುಡಿಯುವ ಬಸವನಂತೆ.

ಸಿದ್ದಲಿಂಗಯ್ಯನವರನ್ನು ನೋಡಿದರೆ ಅವರಲ್ಲಿ ಅಡಗಿರುವ ಮಹತ್ವಗಳು ಯಾವುವೂ ತಿಳಿಯುವುದಿಲ್ಲ. ದರ್ಶನಾಪೇಕ್ಷಿಗಳಾಗಿ ಬಂದವರನೇಕರು ನಿರಾಶೆ ಪಟ್ಟುಕೊಂಡು ಹಿಂತಿರುಗಿದ್ದಾರೆ—ಅಂತಹ ನೀರಸ ಮುಖಭಂಗಿ. ಅವರು

ಕೋಪದಿಂದ ಕೆರಳಿದುದನ್ನು ನಾನು ಕಂಡಿಲ್ಲ; ಕೇಳಿಲ್ಲ. ಉದ್ರೇಕಗೊಂಡರೂ ಅದನ್ನು ತಕ್ಷಣ ನುಂಗಬಲ್ಲ ಸಾಮರ್ಥ್ಯ ಅವರಿಗಿದೆ.

ಸಿದ್ದಲಿಂಗಯ್ಯನವರು ಮೈಸೂರಿಗೇಕೆ ಇಡೀ ಕರ್ನಾಟಕಕ್ಕೇ ಆದರ್ಶ ಪುರುಷರು, ಅಲಂಕಾರ ಪ್ರಾಯರು; ಅವರು ಮಾಡಿದ ಮಹಾತ್ಯಾಗವನ್ನು ಮೈಸೂರು ಜನತೆ ಎಂದಿಗೂ ಮರೆಯುವಂತಿಲ್ಲ. ಅವರ ಸೌಹಾರ್ದಸ್ವಭಾವ, ವಿಶಾಲಹೃದಯ, ಸೇವಾದೀಕ್ಷೆ—ಇವು ಅಪ್ರತಿಮವಾದುವು. ಅದಕ್ಕಾಗಿ ಮೈಸೂರಿನ ಶಾಂತಿ ಸಮರದ ಚರಿತ್ರೆಯಲ್ಲಿ ಸಿದ್ದಲಿಂಗಯ್ಯನವರಿಗೆ ಪೂಜ್ಯಸ್ಥಾನ; ಹಿರಿಯಪಟ್ಟ.





ಹೆಚ್. ಸಿ. ದಾಸಪ್ಪ

## ಹೆಚ್. ಸಿ. ದಾಸಪ್ಪ

" ಶ್ರೀ ದಾಸಪ್ಪನವರನ್ನು ನಾನು ಸ್ವತಃ ಬಲ್ಲೆ. ಅವರು ಕಳೆದ ೨೦ ವರ್ಷಗಳಿಂದ ವಕೀಲರಾಗಿರುವ ಮೈಸೂರಿನ ಅತ್ಯಂತ ಗೌರವಯುತರಾದ ಪ್ರಜೆ. ಮೈಸೂರು ದೇಶದ ಒಂದು ಭಾಗದಲ್ಲಿ ಮ್ಯಾಜಿಸ್ಟ್ರೇಟರ ಪ್ರತಿಬಂಧ ಕಾಜ್ಞೆಯನ್ನು ಮುರಿದು ಭಾಷಣ ಮಾಡುವ ಮತ್ತು ನನ್ನ ಸೂಚನೆಯ ಮೇರೆಗೆ ಶ್ರೀ ನಾಗೇಶ್ವರಯ್ಯರ ವಿಚಾರಣಾ ಸಮಿತಿಯನ್ನು ಬಹಿಷ್ಕರಿಸು ವಂತೆ ಸತ್ಯಾಗ್ರಹಿಗಳಿಗೆ ತಿಳಿಸುವ ಗಂಡೆದೆ ಅವರದಾಗಿತ್ತು. ಈ ಮಹಾಪ ರಾಧಕ್ಕಾಗಿ ಮೈಸೂರಿನ ನ್ಯಾಯಾಧೀಶರು ಶ್ರೀ ದಾಸಪ್ಪನವರನ್ನು ಎಂದೆಂದಿಗೂ ವಕೀಲ ವೃತ್ತಿಯನ್ನೇ ಕೈಗೊಳ್ಳದಂತೆ ವೃತ್ತಿಬಾಹಿರರನ್ನಾಗಿ ಮಾಡಿದ್ದಾರೆ. ಇದರಿಂದ ನ್ಯಾಯಾಧೀಶರ ಆಸೆ ಸಫಲಗೊಳ್ಳುವುದಾದರೆ ಶ್ರೀ ದಾಸಪ್ಪ ನವರು ದಟ್ಟ ದರಿದ್ರಾವಸ್ಥೆಗೆ ಇಳಿಯಬಹುದು. ಅವರ ತೀರ್ಪಿನ ಬರವಣಿ ಗೆಗೆ ಬೆಲೆ ಸಿಕ್ಕುವುದಾದರೆ ಶ್ರೀ ದಾಸಪ್ಪನವರು ಸಮಾಜ ಬಾಹಿರರಾಗ ಬಹುದು; ಯೋಗ್ಯರಲ್ಲದೆ ಹೋಗಬಹುದು. ಅಷ್ಟೆ.

"ದಾಸಪ್ಪನವರು ನಿಷ್ಕಳಂಕ ಗುಣಾಢ್ಯರೆಂದು ಮತ್ತು ನಿರ್ಮಲ ಪ್ರಮಾ ಣಿಕರೆಂದೂ ನಾನು ತಿಳಿದುಕೊಂಡಿದ್ದೇನೆ. ಅಹಿಂಸಾ ಪರಿಪಾಲನೆಮಾಡಲು ಅವರು ತಮ್ಮ ಶಕ್ತಿಮೀರಿ ಸತತ ಪ್ರಯತ್ನ ನಡೆಯಿಸುತ್ತಿದ್ದಾರೆ. ರಾಷ್ಟ್ರಾಭಿ ಮಾನಿಗಳಾದ ಹಲವು ಬ್ರಿಟಿಷ್ ಇಂಡಿಯದ ವಕೀಲರುಗಳು ಮಾಡಿದ ಮತ್ತು ಮಾಡಲಾಗದ ತ್ಯಾಗಗಳನ್ನು ಅವರು ಮಾಡಿದ್ದಾರೆ. ಮೈಸೂರು ನ್ಯಾಯಾ ಧೀಶರು ತೀರ್ಪುಕೊಡುವಾಗ ತಮ್ಮನ್ನೇ ತಾವು ಮರೆತಿದ್ದಾರೆಂದು ನನ್ನ ಅಭಿಪ್ರಾಯ. ಇದರಿಂದ ಶ್ರೀ ದಾಸಪ್ಪನವರೇನೂ ಕಷ್ಟಕ್ಕೆ ಈಡಾಗುವುದಿಲ್ಲ. ಮೈಸೂರಿನ ಪ್ರಜಾದೃಷ್ಟಿಯಲ್ಲಿ ಅವರು ಇನ್ನೂ ಉನ್ನತ ಮಟ್ಟಕ್ಕೆ ಏರುವರು."

—ಇದು ಮಹಾತ್ಮ ಗಾಂಧಿಯವರಿಂದ ದಾಸಪ್ಪನವರಿಗೆ ಬಯಸದೇ ಬಂದ ಸರ್ಟಿಫಿಕೇಟ್. ಇಂತಹ ಸೌಭಾಗ್ಯ, ಸುಕೃತ ಮತ್ತಿನ್ನಾವ ಮುಂದಾ ಳಿಗೂ ಸಿಕ್ಕಿಲ್ಲ. ಅದು ದಾಸಪ್ಪನವರ ಪುಣ್ಯವಿಶೇಷ.

ಮೈಸೂರು ಹೈಕೋರ್ಟಿನ ಪ್ರಧಾನ ನ್ಯಾಯಾಧೀಶರಾಗಿದ್ದ ಸರ್ ರೇಲಿ ಎಂಬಾತನು ನಮ್ಮ ನಾಯಕರುಗಳ ಪೈಕಿ ಎಂಟು ಜನ ವಕೀಲರ ಸನ್ನದ್ದನ್ನು ರದ್ದುಮಾಡಿ ಸತ್ಯದಬಗ್ಗೆ ಹೀನವಾಗಿ ಮಾತನಾಡಿದ್ದನು. ಪರಕೀಯನೊಬ್ಬನು ಸತ್ಯ ಮತ್ತು ನಮ್ಮ ಜನಾಂಗದ ಬಗ್ಗೆ ಇಷ್ಟೊಂದು ತುಚ್ಛವಾಗಿ ಮಾತನಾಡಿದನಲ್ಲಾ ಎಂದು ಸಂತಾಪಗೊಂಡ ಮಹಾತ್ಮರು ತಮ್ಮ ಹರಿಜನ ಪತ್ರಿಕೆಯಲ್ಲಿ "ಮೈಸೂರು ವಕೀಲರು" ಎಂಬ ಶಿರೋನಾಮೆಯಲ್ಲಿ ಒಂದು ಲೇಖನ ಬರೆದರು. ಅದರಲ್ಲಿ ದಾಸಪ್ಪನವರ ಬಗ್ಗೆ ಮಹಾತ್ಮರು ಮೇಲ್ಕಂಡ ರೀತಿ ಬರೆದಿದ್ದರು. ಇದರಿಂದ ಕೀರ್ತಿಯ ಪರ್ವತವನ್ನು ಏರುತ್ತಿದ್ದ ದಾಸಪ್ಪನವರನ್ನು ಒನ್ಮೆಲೇ ಶಿಖರಕ್ಕೆ ಕೊಂಡೊಯ್ದಂತಾಯ್ತು.

## ಶಾಂತಮೂರ್ತಿ

ದಾಸಪ್ಪನವರು ಬಹಳ ಮೃದು; ಶಾಂತ; ಅಷ್ಟೇ ಗಂಭೀರ ಮತ್ತು ಸರಳ. ಅವರ ಮಾತಿನಲ್ಲಿ ತರ್ಕದ ಚಾಕಚಕ್ಯತೆ ಇಲ್ಲ; ಬೆಡಗು ಬಿನ್ನಾಣಗಳಿಲ್ಲ; ಶ್ರದ್ಧೆಯ ಸಿದ್ಧಾಂತವಿದೆ. ಚರ್ಚೆಯಲ್ಲಿ ಪೂರ್ವಪಕ್ಷದ ಉದ್ವೇಗವಿಲ್ಲ; ಸಹನೆಯ ಸರಳತೆ ಇದೆ. ಸಭೆ ಸಮ್ಮೇಳನಗಳಲ್ಲಿ ಕುಳಿತರೂ ಮನೆಯ ಹಿರಿಯಾಳಿನಂತೆ ಪ್ರಶಾಂತವಾಗಿ ಪಸನ್ನವದನದಿಂದ ಕುಳಿತಿರುತ್ತಾರೆ. ಅದು ಅವರ ಠೀವಿ; ಹುಟ್ಟುಗುಣ. ಬಾಳಿನಲ್ಲಿ ಹೇಗೋ ಭಾಷಣದಲ್ಲಿಯೂ ಹಾಗೆಯೇ ತುಂಬಾತಾಳ್ಮೆ; ಸಹಜವಾದ ಶೈಲಿ; ಮಾತುಗಳು ಬಿರುಸು ಬಿಟ್ಟಂತಲ್ಲ; ಇಳಿಜಾರಿನಲ್ಲಿ ಗಾಡಿಬಿಟ್ಟಂತೆ—ಹಿಡಿತ, ನಿಧಾನ. ಆದರೂ ಮಾತಿನಲ್ಲಿ ಗುರಿತಪ್ಪುವುದು ಕಡಿಮೆ. ಅಷ್ಟು ಲಕ್ಷ್ಯಶುದ್ಧಿ ಅವರದು.

## ವಿದ್ಯಾಭ್ಯಾಸವೆಲ್ಲಿ ನಡೆಯಿತು?

ದಾಸಪ್ಪನವರು ೧೮೯೪ ರಲ್ಲಿ ಮಡಕೇರಿಯಲ್ಲಿ ಜನಿಸಿದರು. ಹಾಗೆಂದ ಮಾತ್ರಕ್ಕೆ ಮೈಸೂರಿನವರಲ್ಲವೆಂದು ಭಾವಿಸಬಾರದು. ಇವರ ತಂದೆಯವರಿಗೆ ಮಡಕೇರಿಯಲ್ಲಿ ಸಬ್‌ಜಡ್ಜ್ ಕೆಲಸವಿದ್ದುದರಿಂದ ದಾಸಪ್ಪನವರ ಬಾಲ್ಯದಲ್ಲಿ ಅಕ್ಷರಾಭ್ಯಾಸ ಮಡಕೇರಿಯಲ್ಲಿ ನಡೆಯಿತು. ಅಲ್ಲಿಂದಾಚೆಗೆ ಇವರ ವಿದ್ಯಾಭ್ಯಾಸವೆಲ್ಲವೂ ಒಂದುಕಡೆ ನಡೆಯಲಿಲ್ಲ. ಮಾಧ್ಯಮಿಕ ವಿದ್ಯಾಭ್ಯಾಸ ಬೆಂಗಳೂರು, ಪ್ರೌಢ ಮಡಕೇರಿ, ಎಂಟ್ರೆನ್ಸ್ ಮೈಸೂರು, ಬಿ. ಎ. ಮದರಾಸು,

ಎಲ್‌ಎಲ್. ಬಿ. ಬೊಂಬಾಯಿ—ಈ ರೀತಿ ಒಂದೊಂದು ಪರೀಕ್ಷೆ ಒಂದೊಂದು ಪಟ್ಟಣದಲ್ಲಿ ನಡೆಯಿಸಿದ್ದಾರೆ. ಆದ್ದರಿಂದಲೇ ಎಲ್ಲಾ ರೀತಿಯ, ಜಾತಿಯ ಜನರಲ್ಲೂ ಸೌಹಾರ್ದದಿಂದ ಸಮ್ಮಿಳನವಾಗುವ ಸ್ವಭಾವ ಈಗಲೂ ಅವರಲ್ಲಿ ಕಂಡು ಬರುತ್ತಿರುವುದು.

೧೯೧೪ ರಲ್ಲಿ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಆ ವೇಳೆಗಾಗಲೇ ದಾಸಪ್ಪನವರ ಮನಸ್ಸು ರಾಜಕೀಯಕಡೆಗೆ ತಿರುಗಲಾರಂಭಿಸಿತ್ತು. ದೇಶದ ಕಷ್ಟವನ್ನಿಂಗಿಸುವ ಕಾರ್ಯ ಪ್ರತಿಯೊಬ್ಬ ಯುವಕನ ಪಾಲಿಗೆ ಸೇರಿದ್ದು ಎಂದು ಅವರ ಮನಸ್ಸು ಹೇಳಲಾರಂಭಿಸಿತು. ಪರೀಕ್ಷೆ ಮೂರುತಿಂಗಳಿದೆ ಎಂಬ ಭಯವಿಲ್ಲದೆ ಆಗ ಬೊಂಬಾಯಿನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ಸ್ವಯಂ ಸೇವಕರಾಗಿ ಕೆಲಸ ಮಾಡಲು ಹೋಗಿದ್ದರು. ಒಮ್ಮೆ ಇವರು ಓದುತ್ತಿದ್ದ ಕ್ರಿಶ್ಚಿಯನ್ ಕಾಲೇಜಿನಲ್ಲಿ ಮಹಾತ್ಮ ಗಾಂಧಿಯವರು ಮಾಡಿದ ಭಾಷಣ ದಾಸಪ್ಪನವರ ಮನಸ್ಸನ್ನು ಮಾರ್ಪಡಿಸಿತು. ಓದುನಿಲ್ಲಿಸಿ ದೇಶದ ಸೇವಾ ಕಾರ್ಯಕ್ಕಾಗಿ ನಿಲ್ಲಬೇಕೆಂದು ತೀರ್ಮಾನಿಸಿಕೊಂಡರು. ಆದರೆ ಸಿರಿವಂತರ ಮನೆತನದಿಂದ ಬಂದಿದ್ದ ಅವರಿಗೆ ಆ ತೀರ್ಮಾನ ಕ್ಷಣಿಕವಾಯ್ತು. ಅಧಿಕಾರದಲ್ಲಿದ್ದ ಅಪ್ಪನ ಬಲವಂತ ಹೆಚ್ಚಾದುದರಿಂದ ಬೊಂಬಾಯಿಗೆ ಪ್ರಯಾಣಮಾಡಿ ಎಲ್‌ಎಲ್. ಬಿ- ಪರೀಕ್ಷೆಗೆ ಕುಳಿತರು. ಆಗಲೂ ಕಾಂಗ್ರೆಸ್ ಅಧಿವೇಶನಗಳಲ್ಲಿ ಭಾಗವಹಿಸುವುದನ್ನು ಬಿಟ್ಟಿರಲಿಲ್ಲ.

## ವ್ಯಕ್ತಿತ್ವ

ದಾಸಪ್ಪನವರು ಅಂತಹ ಭವ್ಯಾಕಾರ ಮೂರ್ತಿಯೇನೂ ಅಲ್ಲ. ಗಿಡ್ಡನಾದ ಬುಡ್ಡ ಶರೀರ; ಸ್ಥೂಲಕಾಯವೆಂದೇ ಹೇಳಬೇಕು. ದುಂಡಾದ ಮುಖದಲ್ಲಿ ತುಂಬಿದಗಲ್ಲ. ವಿಶಾಲ ಕಣ್ಣುಗಳು ; ಆ ಕಣ್ಣುಗಳಲ್ಲಿ ಮಮತೆ ಮತ್ತು ಸ್ನೇಹಮಯ ಕಾಂತಿ. ಹಣೆಯಲ್ಲಿ ಹೊಣೆಗಾರಿಕೆ ಹೊತ್ತಭಾರದ ಗುರುತು ಸ್ಪಷ್ಟವಾಗಿ ಕಾಣುತ್ತದೆ. ಮಾತನಾಡಿಸುವವರನ್ನೆಲ್ಲಾ ಬಾಯಿತುಂಬ ಮಾತನಾಡಿಸುತ್ತಾರೆ. ಆ ಧ್ವನಿಯಲ್ಲಿ ಹಿತವಾದ ಗಾಂಭೀರ್ಯವಿದೆ ; ಗುಟುರಿನ ಜಂಭವಿಲ್ಲ. ಅವರ ಗಾಂಭೀರ್ಯದಲ್ಲಿ ನಗೆ ಕಡಿಮೆ. ನಕ್ಕರೆ ಸಣ್ಣಗೆ ನಗುತ್ತಾರೆ. ಅವರು ಮಾತನಾಡುವುದು ಕಡಿಮೆ. ಆಡಿದರೂ ರಾಜಕೀಯವನ್ನು ಬಿಟ್ಟೇ

ಅವರಮಾತು. ಅಂದರೆ ರಾಜಕೀಯದಲ್ಲಿ ಹೆಚ್ಚು ಆಸಕ್ತಿಯಿಲ್ಲವೆಂದಲ್ಲ. ಅದು ನುಡಿಗಿಂತ ನಡೆಯಲ್ಲಿ ಹೆಚ್ಚಾಗಿರಬೇಕೆಂದು ಅವರ ಆಶಯ. ಅವರ ಕೃತಿಯೂ ಹಾಗೆಯೇ.

ಸಬ್ ಜಡ್ಜರ ಮಗನಾಗಿ ಹುಟ್ಟಿ ಸಬ್ ಜಡ್ಜರಾಗಲು ಯೋಗ್ಯತಾವಕಾಶಗಳಿದ್ದ ದಾಸಪ್ಪನವರು ಸಾರ್ವಜನಿಕ ಕಾರ್ಯರಂಗಕ್ಕೆ ಧುಮುಕುವರೆಂದು ಯಾರೂ ಊಹಿಸಿರಲಿಲ್ಲ. ಸುಖಜೀವನ ನಡೆಸಲು ಬೇಕಾದಷ್ಟು ಸೌಕರ್ಯವಿತ್ತು ; ವಾತಾವರಣವಿತ್ತು. ಆದರೆ ಅದಾವುದೂ ದೀನಜನಸೇವೆಗೆ ಅಡ್ಡ ಬರಲಿಲ್ಲ. ಅನೇಕವೇಳೆ ಮನಸ್ಸು ಚಂಚಲವಾಗಿ ಅಡ್ಡದಾರಿ ಹಿಡಿಸಿತ್ತು. ಎಲ್ಎಲ್. ಬಿ. ಪರೀಕ್ಷೆಯಾದೊಡನೆ ವಕೀಲಿ ವೃತ್ತಿಯನ್ನು ಕೈಗೊಳ್ಳದೆ ಸರಕಾರಕ್ಕೆ ನಾಮಕರಣಕ್ಕಾಗಿ ಅರ್ಜಿ ಹಾಕಿದರು. ಸರಕಾರವು ಆ ಅರ್ಜಿಯನ್ನು ಮನ್ನಿಸದೆ ತಿರಸ್ಕರಿಸಿದ್ದರಿಂದ ಇಂದು ದೇಶದ ನಾಯಕತ್ವ ಅವರ ಕೊರಳಿಗೆ ಬಿತ್ತು; ಅದಕ್ಕಾಗಿ ಅವರು ಮತ್ತು ಜನತೆ ಸರ್ಕಾರಕ್ಕೆ ಋಣಿಗಳಾಗಿರಬೇಕು.

**ಸಾರ್ವಜನಿಕ ರಂಗದ ಸಂಪರ್ಕ**

ವಕೀಲಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದಮೇಲೆ ವಕೀಲಿ ವೃತ್ತಿಯನ್ನು ಕೈಗೊಳ್ಳಬೇಕಾಗಿದ್ದರೆ ನಾಲ್ಕು ವರ್ಷಗಳು ಬೇಕಾಯ್ತು. ೧೯೨೨ರಲ್ಲಿ ಮೈಸೂರಿನಲ್ಲಿ ವೃತ್ತಿಯನ್ನಾರಂಭಿಸಿದರು. ವಾದಚತುರರಾದುದರಿಂದ ವೃತ್ತಿ ಚೆನ್ನಾಗಿ ನಡೆಯುತ್ತಿತ್ತು. ಮನಸ್ಸು ಸಾರ್ವಜನಿಕಸೇವೆ, ಸಮಾಜ ಸೇವೆಗಳಕಡೆ ಸೆಳೆಯುತ್ತಿತ್ತು. ಆದ್ದರಿಂದ ವೃತ್ತಿಯ ಜೊತೆಗೆ ಸೇವಾಕಾರ್ಯವನ್ನೂ ಸೇರಿಸಿಕೊಂಡರು.

ಮೈಸೂರಿನಲ್ಲಿ ಆಗ ಪ್ರಜಾಮಿತ್ರಮಂಡಲಿ ಎಂಬ ಒಂದು ರಾಜಕೀಯ ಸಂಸ್ಥೆಯಿತ್ತು. ಕೋಮುವಾರು ಏರುಪೇರುಗಳನ್ನು ಸರಿಪಡಿಸುವುದೇ ಆ ಸಂಸ್ಥೆಯ ಮುಖ್ಯ ಉದ್ದೇಶವಾಗಿತ್ತು. ದಾಸಪ್ಪನವರು ಆ ಸಂಸ್ಥೆಗೆ ಸೇರಿದರು. ಪಿಂಜರಾಪೋಲಿನ ಕಾರ್ಯದರ್ಶಿಗಳಾಗಿ ಅಲ್ಲಿ ತಮ್ಮ ಸೇವೆ ಸಲ್ಲಿಸಲು ಆರಂಭಿಸಿದರು. ಒಕ್ಕಲಿಗರ ಸಂಘದ ಕಾರ್ಯದರ್ಶಿಗಳಾಗಿ ಅನೇಕ ಸಮ್ಮೇಳನಗಳನ್ನು ಏರ್ಪ

ಡಿಸಿದರು. ಹರಿಜನಸಂಘ, ಹೈಸ್ಕೂಲಿನ ಸಮಿತಿಗಳು, ಕಿವುಡು ಮೂಕರ ಪಾಠಶಾಲಾ ಸಮಿತಿ ಮುಂತಾದುವುಗಳಲ್ಲಿ ಸದಸ್ಯರಾಗಿ ಕೆಲಸಮಾಡಿದರು.

ಮೈಸೂರು ಪೌರಸಭೆಯಲ್ಲಿ ದಾಸಪ್ಪನವರಿಗೆ ೧೯೨೪ ರಿಂದ ಒಂದು ಸ್ಥಾನ ಕಟ್ಟಿಟ್ಟ ಮುಡುಪು. ಮಲ್ಲೇಶ್ವರದಲ್ಲಿ ನಡೆದ ಅಖಿಲ ಮೈಸೂರು ಕಾಂಗ್ರೆಸ್ ಸಮಿತಿಯ ಠರಾವು ಜಾರಿಗೆ ಬರುವವರೆಗೂ ಅಂದರೆ ಒಂದೇ ಸಮನೆ ೧೪ ವರ್ಷಗಳಕಾಲ ಪೌರಸಭಾ ಸದಸ್ಯರಾಗಿ ದುಡಿದಿದ್ದಾರೆ. ಈ ಸೇವೆಯ ಫಲವಾಗಿ ಅಖಿಲಭಾರತ ಸ್ಥಳೀಯ ಸಂಸ್ಥೆಗಳ ಸಮ್ಮೇಳನಕ್ಕೆ ಪ್ರತಿನಿಧಿಯಾಗಿ ಚುನಾಯಿಸಲ್ಪಟ್ಟರು. ಅಲ್ಲಿ ಉಪಾಧ್ಯಕ್ಷಪದವಿ ಕೊರಳಿಗೆ ಬಿತ್ತು. ಎರಡು ವರ್ಷಗಳು ಉಪಾಧ್ಯಕ್ಷರಾಗಿ ದಕ್ಷತೆಯಿಂದ ಕೆಲಸಮಾಡಿದರು. ರಾಣಿಬೆನ್ನೂರಿನಲ್ಲಿ ನಡೆದ ತರುಣ ಸಮ್ಮೇಳನಕ್ಕೆ ಇವರೇ ಅಧ್ಯಕ್ಷರು. ಇದಲ್ಲದೆ ಅನೇಕ ರೈತರ ಹಾಗೂ ರಾಜಕೀಯ ಪರಿಷತ್ತುಗಳ ಅಧ್ಯಕ್ಷತೆ ವಹಿಸಿದ್ದಾರೆ.

ದಾಸಪ್ಪನವರು ನ್ಯಾಯವಿಧಾಯಕ ಸಭೆ ಮತ್ತು ಪ್ರಜಾಪ್ರತಿನಿಧಿ ಸಭೆಗಳಲ್ಲಿ ಸದಸ್ಯರಾಗಿದ್ದು ತಮ್ಮ ಪ್ರತಿಭೆಯನ್ನು ಚೆನ್ನಾಗಿ ತೋರಿಸಿದ್ದಾರೆ. ಆ ಸಭೆಗಳಲ್ಲಿ ದಾಸಪ್ಪನವರು ಎದ್ದರೆ ಒಂದು ಸಮಸ್ಯೆ ಎದ್ದಂತೆಯೇ. ಅದನ್ನು ಇವರೇ ಬಿಡಿಸಿ ಸರ್ಕಾರಕ್ಕೆ ದಾರಿ ತೋರಿಸಬೇಕು, ಅಂತಹ ಶಕ್ತಿ ಇವರದು. ಇವರು ಅನೇಕಾನೇಕ ಸ್ಥಾಯೀ ಸಮಿತಿಗಳಲ್ಲಿಯೂ ರಿಟ್ರೆಂಚ್‌ಮೆಂಟ್ ಸಮಿತಿ, ಹಿಂದೂ ಸ್ತ್ರೀಯರ ಹಕ್ಕುಬಾಧ್ಯತಾ ಸಮಿತಿ ಮುಂತಾದುವುಗಳಲ್ಲಿ ಸದಸ್ಯರಾಗಿ ಕೆಲಸಮಾಡಿದ್ದಾರೆ. ಅಂತೂ ಮೈಸೂರು ಸಂಸ್ಥಾನದ ಸಾರ್ವಜನಿಕ ರಂಗದಲ್ಲಿ ಇವರೊಬ್ಬ ಪ್ರಮುಖ ವ್ಯಕ್ತಿ. ನಿಸ್ವಾರ್ಥಸೇವಾ ಧುರೀಣ.

## ಶ್ರೀಮತಿ ಯಶೋಧರಾದೇವಿ

ಇವರ ಬಾಳಿಗೆ ಬಣ್ಣ ಕೊಟ್ಟವರು ಇವರ ಧರ್ಮಪತ್ನಿ ಶ್ರೀಮತಿ ಯಶೋಧರಾದೇವಿಯವರು. ೧೯೨೯ ರಲ್ಲಿ ಇವರೀರ್ವರ ಮಿಳನವಾಯಿತು. ದಾಸಪ್ಪನವರ ಧಮನಿಯಲ್ಲಿ ಹರಿಯುತ್ತಿದ್ದ ರಾಜಕೀಯ ರಕ್ತ ಯಶೋಧರಮ್ಮನವರ ನಾಳಗಳಲ್ಲೂ ಕೆಲಸಮಾಡದೆ ಹೋಗಲಿಲ್ಲ; ಧೀರನ ಮಗಳಾಗಿ ಜನಿಸಿದ್ದ ಈ ವೀರ ಮಹಿಳೆಗೆ ರಾಜಕೀಯ ಪ್ರಜ್ಞೆ ಉಂಟಾಯಿತು.

ಮನೆಯಲ್ಲಿನ ಸುಖ ದುಃಖಕ್ಕೆ ಸಮಭಾಗಿಯಾಗಿರುವಂತೆ ಪತಿಯ ರಾಜಕೀಯ ಸೇವಾಕ್ಷೇತ್ರದಲ್ಲೂ ಸಮಭಾಗಿಯಾಗಿರಲು ಆಕೆ ಮನಸ್ಸುಮಾಡಿದರು. ಆದರೆ ಆಗ ಮೈಸೂರಿನಲ್ಲಿ ಮಹಿಳೆಯರು ಇನ್ನೂ ರಾಜಕೀಯಕ್ಕೆ ಇಳಿದಿರಲಿಲ್ಲ. ಹೆಣ್ಣು ಹೃದಯಗಳು ರಾಜಕೀಯವನ್ನು ಪ್ರವೇಶಿಸಲು ಹಿಂಜರಿಯುತ್ತಿದ್ದುವು.

ಈ ಸಮಯದಲ್ಲಿ ಇವರ ಸಂಬಂಧಿಗಳೂ ಸಹೋದರರೂ ಇತ್ತ ಪ್ರೋತ್ಸಾಹದಿಂದ ಯಶೋಧರಮ್ಮನವರ ಯಶಸ್ಸು ಬೆಳಕಿಗೆ ಬರಲು ಸಾಧ್ಯವಾಯ್ತು. ಜೊತೆಗೆ ಪತಿದೇವನ ಸಹಕಾರವಿತ್ತು. ತಾನೂ ದೇಶಸೇವೆ ಮಾಡಬೇಕೆಂಬ ಉತ್ಸಾಹವಿತ್ತು. ಆದ್ದರಿಂದ ಅವರು ಮುಂದೆ ಬಂದು ಕಾರ್ಯೋನ್ಮುಖರಾದರು.

ದಾಸಪ್ಪನವರ ವಿದ್ಯಾಭ್ಯಾಸ ಸ್ಕೂಲಿನಿಂದ ಸ್ಕೂಲಿಗೆ ಊರಿನಿಂದ ಊರಿಗೆ ಹೇಗೆ ಹಾರಿತೋ ಹಾಗೆಯೇ ಅವರ ರಾಜಕೀಯ ಸೇವೆಯೂ ಸಂಸ್ಥೆಯಿಂದ ಸಂಸ್ಥೆಗೆ ಹಾರಿತು. ಅಂದರೆ ಅವರು ತಮ್ಮ ರಾಜಕೀಯ ಅಭಿಪ್ರಾಯ ಬದಲಾಯಿಸುತ್ತಿದ್ದರೆಂದು ತಿಳಿಯಬಾರದು. ಅದು ಅಚಲವಾದ ಹಿಮಾಚಲದಂತೆ ಸ್ಥಿರವಾಗಿತ್ತು. ಮೊದಲು ಪ್ರಜಾಮಿತ್ರ ಮಂಡಲಿಯಲ್ಲಿದ್ದವರು ೧೯೩೪ರಲ್ಲಿ ಪ್ರಜಾಸಂಯುಕ್ತ ಪಕ್ಷ ಎಂಬ ಸಂಸ್ಥೆಗೆ ಸೇರಿದರು. ತರುವಾಯ ಪ್ರಜಾಸಂಯುಕ್ತ ಪಕ್ಷವು ಕಾಂಗ್ರೆಸ್ಸಿನೊಡನೆ ಮಿಳಿತವಾಗಲು ಇವರೂ ಕಾಂಗ್ರೆಸ್ಸಿಗೆ ಸೇರಿದರು. ಈ ಎಲ್ಲಾ ಸಂಸ್ಥೆಗಳಲ್ಲೂ ಇವರಿಗೆ ಉತ್ತಮಸ್ಥಾನವಿತ್ತು. ಬೇಕಾದಷ್ಟು ಬೆಲೆ ಇತ್ತು.

## ಅಧ್ಯಕ್ಷಪಟ್ಟ

ಮೈಸೂರು ಕಾಂಗ್ರೆಸ್ಸಿನ ದ್ವಿತೀಯಾಧ್ಯಕ್ಷರಾಗಿ ಆರಿಸಲ್ಪಟ್ಟದ್ದು ದಾಸಪ್ಪನವರ ದಕ್ಷತೆಗೊಂದು ನಿದರ್ಶನ. ಇವರು ಅಧ್ಯಕ್ಷಪಟ್ಟಕ್ಕೆ ಬಂದಾಗ ದೇಶದಲ್ಲಿ ಆಂದೋಳನವೆದ್ದಿತ್ತು. ಸರ್ಕಾರವು ತನ್ನ ಕ್ರೂರ ಕೈಗಳಿಂದ ಕಾಂಗ್ರೆಸ್ಸಿನ ಕತ್ತು ಹಿಸುಕಲು ಆರಂಭಿಸಿತ್ತು. ವಿದುರಾಶ್ವತ್ಥದಲ್ಲಿ ನಿರಪರಾಧಿ ಜನಗಳನ್ನು ಗುಂಡುಹೊಡೆದು ಕೊಂದು ತನ್ನ ಅವಿವೇಕವನ್ನು ವ್ಯಕ್ತಪಡಿಸಿತ್ತು ; ಅನೇಕ ಕಾಂಗ್ರೆಸ್ ಮುಖಂಡರಮೇಲೆ ಕಾನೂನು ಪ್ರಯೋಗವನ್ನು ಮಾಡಿತ್ತು. ಇಂತಹ ಗಭೀರ ಸಮಯದಲ್ಲಿ ಅಧ್ಯಕ್ಷಪಟ್ಟವನ್ನು

ಹತ್ತಿದರೂ ಕಾಂಗ್ರೆಸ್ಸಿನ ಪ್ರಭಾವವು ಮೈಸೂರಿನ ಮೂಲೆ ಮೂಲೆಗೂ ಮುಟ್ಟುವಂತೆ ಮಾಡಲು ದಾಸಪ್ಪನವರು ಶ್ರಮಿಸಿದರು. ದಾಸಪ್ಪನವರು ಮತ್ತು ಇತರ ಮುಂದಾಳುಗಳೂ ಪ್ರಚಾರ ಕಾರ್ಯಕ್ಕೆ ಹೋಗಿದ್ದಾಗ್ಗೆ ಕೋಲಾರದ ಚಿನ್ನದಗಣಿಯಲ್ಲಿ ದಸ್ತಗಿರಿಯಾಗಿ ೩ ತಿಂಗಳು ಕಠಿಣ ಶಿಕ್ಷೆಗೆ ಗುರಿಯಾದರು.

ಈ ಸಮಾಚಾರ ಕೇಳಿದೊಡನೆ ಕಾಂಗ್ರೆಸ್ ಕೆಲಸಗಾರರಿಗೆ ಸಹಿಸಲಾಗ ಲಿಲ್ಲ. ಒಡನೆಯೇ ಸತ್ಯಾಗ್ರಹವನ್ನು ಆರಂಭಿಸಿದರು. ದೇಶದಲ್ಲೆಲ್ಲಾ ಸಾವಿರಾರು ಜನರು ಸತ್ಯಾಗ್ರಹಮಾಡಿ ಜೈಲು ತುಂಬಿದರು. ಜೈಲಿನಲ್ಲಿ ರಾಜಕೀಯ ಖೈದಿಗಳ ಸಂಖ್ಯೆ ಮೂರು ಸಾವಿರದವರೆಗೂ ಏರಿತು. ಸರ್ಕಾರ ಸೋತು ಸುಮ್ಮನಾಯಿತು. ಆದರೂ ಹಿಡಿದಿದ್ದವರನ್ನು ಬಿಡದೆ ಶಿಕ್ಷೆಗೆ ಗುರಿಮಾಡಿತು. ಈ ಸಮಯದಲ್ಲಿ ದಾಸಪ್ಪನವರು ತಮ್ಮ ಮೂರು ತಿಂಗಳ ಕಠಿಣಶಿಕ್ಷೆ ಅನುಭವಿಸಿಕೊಂಡು ಹೊರಗೆ ಬಂದರು.

ದಾಸಪ್ಪನವರ ಮೊದಲ ದಸ್ತಗಿರಿ ೧೯೩೮ ನೇ ಜನವರಿಯಲ್ಲಿ ಆಯಿತು. ಆಗ ರಾಜದ್ರೋಹ ಮೊಕದ್ದಮೆಯೊಂದು ಹೂಡಲ್ಪಟ್ಟಿದ್ದು ಅವರು ೨೦ ದಿವಸಗಳ ನಂತರ ಬಂಧನ ವಿಮುಕ್ತರಾದರು. ಎರಡನೆಯಸಲ ಶಿವಪುರದ ಧ್ವಜ ಸತ್ಯಾಗ್ರಹ ಸಂಬಂಧದಲ್ಲಿ ಕೆಲವು ದಿವಸಗಳು ಕಾರಾಗೃಹ ಪ್ರಾಪ್ತವಾಯಿತು. ಮತ್ತೆ ೧೯೪೨ ರಲ್ಲಿ ರಾಜದ್ರೋಹಕರವಾದ ಭಾಷಣಕ್ಕೆಂದು ದಸ್ತಗಿರಿ ಮಾಡಲ್ಪಟ್ಟು ಒಂದೂವರೆ ವರ್ಷ ಕಠಿಣ ಶಿಕ್ಷೆಯನ್ನು ಅನುಭವಿಸಿ ಹೊರಗೆ ಬಂದರು.

## ಮಹಾತ್ಮರ ಪ್ರಿಯಶಿಷ್ಯ

ದಾಸಪ್ಪನವರದು ಎಣೆಯಿಲ್ಲದ ಭಾಗ್ಯ. ಭಾಗ್ಯಲಕ್ಷ್ಮಿ ಬೇಡವೆಂದರೂ ನುಗ್ಗಿ ಬರುವಂತೆ ಇವರಕೀರ್ತಿ ತಾನೇ ತಾನಾಗಿ ಬೆಳೆಯಲು ಬೇಕಾದಷ್ಟು ಸದವಕಾಶಗಳು ಸಿಕ್ಕಿದವು. ಚಿನ್ನದಗಣಿಯಲ್ಲಿ ಆದ ಶಿಕ್ಷೆಯನ್ನು ಅನುಭವಿಸಿಕೊಂಡು ಜೈಲಿನಿಂದ ಹೊರಗೆಬಂದ ಕೆಲವು ದಿನಗಳಲ್ಲಿ ವಾಯು ಬೇನೆಯಿಂದ ಖಾಯಿಲೆ ಬಿದ್ದರು. ೭–೮ ತಿಂಗಳು ಚಿಕಿತ್ಸೆ ನಡೆಯಿತಾದರೂ ರೋಗ ತಹಬಂದಿಗೆ ಬರಲಿಲ್ಲ. ಚಿಕಿತ್ಸೆ ಪಡೆಯಲು ತಮ್ಮಲ್ಲಿಗೆ ಬರುವಂತೆ ಮಹಾತ್ಮರೇ ಆಗ ದಾಸಪ್ಪನವರಿಗೆ ಆಹ್ವಾನವಿತ್ತರು.

ಅದರಂತೆ ಅಲ್ಲಿಗೆ ಹೋಗಿ ಆರುತಿಂಗಳಕಾಲ ವಾರ್ಧಾ ಆಶ್ರಮದಲ್ಲಿ ತಂಗಿದ್ದರು. ಮಹಾತ್ಮರೇ ಸ್ವತಃ ಇವರಿಗೆ ಚಿಕಿತ್ಸಾನುಕೂಲ ಮಾಡಿಕೊಟ್ಟರು. ರೋಗಿಯಾಗಿದ್ದರೂ ದಾಸಪ್ಪನವರು ಮೈಸೂರಿನ ರಾಜಕೀಯವನ್ನೆಲ್ಲಾ ಪ್ರತಿದಿನವೂ ಗಾಂಧೀಜಿಯವರಿಗೆ ತಿಳಿಸುತ್ತಿದ್ದರು. ಸಾಯಂಕಾಲದ ವೇಳೆ ಮಹಾತ್ಮರು ವಾಯುಸೇವನೆಗೆ ಹೊರಟರೆ ದಾಸಪ್ಪನವರನ್ನೂ ಜೊತೆಗೆ ತಪ್ಪದೆ ಕರೆದೊಯ್ಯುತ್ತಿದ್ದರು. ಅವರಸಖ್ಯ, ಸಾಮೀಪ್ಯ, ಸಾನ್ನಿಧ್ಯ ಎಲ್ಲವೂ ದಾಸಪ್ಪನವರಿಗೆ ಸಿಕ್ಕಿತು; ತಮ್ಮ ಆರೋಗ್ಯ ಗಳಿಸಿಕೊಂಡು ಮಹಾತ್ಮರ ಆಶೀರ್ವಾದ ಪಡೆದು ಆರು ತಿಂಗಳ ಅನಂತರ ಹಿಂತಿರುಗಿದರು. ಅಂತಹ ಸುಯೋಗ ಮೈಸೂರು ನಾಯಕರಿನ್ನಾರಿಗೂ ಸಿಗಲಿಲ್ಲ.

ಇಂತಹ ಅದೃಷ್ಟಶಾಲಿಯಾದರೂ ಇವರಿಗೆ ದುರಾದೃಷ್ಟದ ಪೆಟ್ಟು ಬೀಳದೆ ಇಲ್ಲ. "ದಾಸಪ್ಪನವರಲ್ಲಿ ಜಾತಿ ವೈಷಮ್ಯ ಹೆಚ್ಚು. ಹಳೆಯ ಕೋಮುವಾರು ವಾಸನೆಹೋಗಿಲ್ಲ" ಎಂಬ ಅಪವಾದ ಅವರಿಗೆ ತಪ್ಪಿಲ್ಲ. ನಾಯಕರೆಲ್ಲರೂ ಸ್ಥಾನಬದ್ಧರಾಗಿ ಜೈಲಿನೊಳಗಿದ್ದವೇಳೆ, ಹೊರಗಡೆ ಈ ಬಗ್ಗೆ ಅವ್ಯಾಹತ ಅಪಪ್ರಚಾರ ನಡೆಯಿತು. ದಾಸಪ್ಪನವರು ಈ ಅಪಪ್ರಚಾರದ ಬಿರುಗಾಳಿಗೆ ಸಿಕ್ಕಿ ಬಹಳ ಪರದಾಡಬೇಕಾಯ್ತು. ಹಿಂದೆ ಕೋಮುವಾರು ಸಂಸ್ಥೆಗಳಲ್ಲಿ ಅವರು ಕುಣಿದಾಡಿದ ಪರಿಣಾಮ ಅದು. ಆದರೂ ದಾಸಪ್ಪನವರು ಜಗ್ಗದೆ ಮುಂದುವರಿಯುತ್ತಿದ್ದಾರೆ.

ದಾಸಪ್ಪನವರ ರಾಜಕೀಯ ಜೀವನ ಹಿರಿಯಜೀವನ. ಮೈಸೂರು ಕಾಂಗ್ರೆಸ್ಸನ್ನು ದೊಡ್ಡದಾಗಿ ಮಾಡಲು ಅವರು ದೇಹವನ್ನು ಸವೆಸಿದ್ದಾರೆ. ಅದಕ್ಕಾಗಿ ಅವರು ಪಟ್ಟಕಷ್ಟ—ಮಾಡಿದಸೇವೆ—ಸುಲಭವಾಗಿ ಮರೆಯುವಂತಹುದಲ್ಲ. ಅವರ ಮನಸ್ಸು ಮೃದು ; ಜನ ಅಂದರೆ, ಆಡಿದರೆ ಬಹಳ ದುಃಖಿಸುತ್ತಾರೆ. ದೇಶಕ್ಕಾಗಿ ದುಡಿದು ದೇಹದಂಡನೆ ಮಾಡಿಕೊಂಡಿದ್ದಾರೆ. ಈ ದುಡಿಮೆಯ ಮತ್ತು ವಾಯುಬೇನೆಯ ಪರಿಣಾಮವಾಗಿ ಅವರ ಸ್ಥೂಲಕಾಯ ಈಗ ಬಹಳ ಕರಗಿಹೋಗಿದೆ. ಗುರಿ ಮುಟ್ಟುವವರೆಗೂ ಸೇವೆಮಾಡಿಯೇ ತೀರುವೆನೆಂಬ ನಿರ್ಧಾರ ಮಾತ್ರ ಪ್ರಬಲವಾಗಿದೆ.

---

# ಕೆ. ಟಿ. ಭಾಷ್ಯಂ ಅಯ್ಯಂಗಾರ್

ಕೆ. ಟಿ. ಭಾಷ್ಯಂ. ಅವರೊಂದು ಅಪೂರ್ವ, ಅಸಮಾನ ಮೂರ್ತಿ. ಮೈಸೂರು ಕಾಂಗ್ರೆಸ್ಸಿನ ಪ್ರಮುಖ ವ್ಯಕ್ತಿ. ಅವರ ಹೆಸರು ಹೇಳುತ್ತಿದ್ದಂತೆಯೇ ಅವರ ಶಕ್ತಿಯ ಸ್ವರೂಪ ನಮ್ಮ ಮನಸ್ಸಿನ ಮುಂದೆ ಹರಿದಾಡುತ್ತದೆ. ಮೈಸೂರು ಕಾಂಗ್ರೆಸ್ ಮುಂದಾಳುಗಳ ಶ್ರೇಣಿಯಲ್ಲಿ ತಮ್ಮದೇ ಆದ ಪ್ರತ್ಯೇಕಸ್ಥಾನ, ವ್ಯಕ್ತಿತ್ವ, ವೈಶಿಷ್ಟ್ಯವನ್ನು ಸಾಧಿಸಿಕೊಂಡಿರುವ ವ್ಯಕ್ತಿಯೆಂದರೆ ಕೆ. ಟಿ. ಭಾಷ್ಯಂ ಅಯ್ಯಂಗಾರ್ ಎಂಬುದು ಸರ್ವ ವಿದಿತವಾದುದು. ಅದಕ್ಕೆ ಅವರಲ್ಲಿರುವ ಅಸಾಧಾರಣಶಕ್ತಿ, ಪ್ರಚಂಡ ಪ್ರತಿಭೆಯೇ ಕಾರಣ. ಅದನ್ನು ಅವರೂ ಚೆನ್ನಾಗಿ ಅರಿತುಕೊಂಡಿದ್ದಾರೆ.

**ಬಾಲ್ಯದಲ್ಲೇ ಪ್ರತಿಭಾವಂತ**

ಭಾಷ್ಯಂರವರು ಹುಟ್ಟಿದುದು ೧೮೮೫ ರಲ್ಲಿ. ಹುಟ್ಟಿದ ಆರು ದಿನಗಳಲ್ಲೇ ಹಡೆದ ತಾಯಿಯನ್ನು ಕಳೆದುಕೊಂಡ ಹತಭಾಗ್ಯರು. ಇವರೇ ಆ ತಾಯಿಯ ಮೊದಲನೆಯ ಮತ್ತು ಕೊನೆಯಮಗು. ಮುಂದೆ ಅಸಮಾನ ರಾಷ್ಟ್ರಸೇವಕನಾಗಿ, ಪ್ರಚಂಡಮೂರ್ತಿಯಾಗಿ ಬಾಳುವ ತನ್ನಮಗುವನ್ನು ಮನಸಾರೆ ಮುದ್ದಾಡುವ ಭಾಗ್ಯ ಅವರ ತಾಯಿಗೆ ಇಲ್ಲದೇ ಹೋಯಿತು. ಅಮ್ಮನ ಮಡುಲಲ್ಲಿ ಆಡಿ ಆನಂದಿಸುವ ಸುಕೃತ ಇವರಿಗೂ ಇಲ್ಲದೆ ಹೋಯಿತು. ಸುಮಾರು ಹತ್ತುವರ್ಷಗಳವರೆವಿಗೂ ಅವರ ತಾಯಿಯ ತಂದೆಯ ಮನೆಯಲ್ಲೇ ಬೆಳೆದರು. ಭಾಷ್ಯಂರವರ ತಂದೆ, ಕೆ. ಟಿ. ನರಸಿಂಹ ಐಯ್ಯಂಗಾರ್ ರವರು ಬೆಂಗಳೂರಿನಲ್ಲಿ ಸುಪ್ರಸಿದ್ಧ ವಕೀಲರು.

ಬಾಲ್ಯಾವಸ್ಥೆಯನ್ನು ಮದರಾಸಿನ ಬಳಿ ಇದ್ದ ತಮ್ಮ ತಾಯಿಯವರ ಊರಿನಲ್ಲಿ ಕಳೆದು, ಭಾಷ್ಯಂರವರು ಮಾಧ್ಯಮಿಕ ಅಭ್ಯಾಸಕ್ಕೆ ಬೆಂಗಳೂರಿಗೆ ಬಂದರು. ಅಲ್ಲಿಂದ ಬಿ.ಎ. ತರಗತಿಯವರೆವಿಗೂ ಬೆಂಗಳೂರಿನಲ್ಲಿ ಅಭ್ಯಾಸ ಮಾಡಿದರು. ವಿದ್ಯಾರ್ಥಿ ದೆಸೆಯಲ್ಲೇ ಇವರ ಪ್ರತಿಭೆ ಬೆಳಕಿಗೆ ಬಂತು. ತಂಟೆಕೋರನಾದರೂ ಬುದ್ಧಿವಂತನೆಂಬುದು ಉಪಾಧ್ಯಾಯರಿಗೆಲ್ಲಾ ತಿಳಿ

ದಿತ್ತು. ಕಾಲೇಜಿನಲ್ಲಿ ಚಿನ್ನದ ಪದಕ ಮತ್ತು ಇತರ ಬಹುಮಾನಗಳನ್ನು ಸಹ ಪಡೆದರು. ೧೯೧೭ ರಲ್ಲಿ ಬಿ. ಎ. ಪದವೀಧರರಾದರು. ಓದುತ್ತಿರುವಾಗಲೇ ಭಾಷಣ, ಚರ್ಚಾಕೂಟ ಮುಂತಾದುವುಗಳಲ್ಲಿ ಆಸಕ್ತಿ ಬೆಳೆದಿತ್ತು. ಎಲ್ಲಾ ಸಂಘ ಮತ್ತು ಸಂಸ್ಥೆಗಳ ಸಂಪರ್ಕವೂ ಇತ್ತು. ಭಾಷ್ಯಂರವರ ಇಂದಿನ ಭಾಷಣಶಕ್ತಿ ಆರಂಭವಾದುದು ಆಗಲೇ. ಆಟಪಾಟಗಳಲ್ಲೂ ಇವರು ಹಿಂದುಳಿದಿರಲಿಲ್ಲ. ಫುಟ್‌ಬಾಲ್, ಕ್ರಿಕೆಟ್, ಟೆನ್ನಿಸ್ ಮುಂತಾದ ಆಟಗಳಲ್ಲಿ, ಅಭಿರುಚಿ ಇತ್ತು; ಒಳ್ಳೇ ಆಟಗಾರರಾಗಿಯೂ ಇದ್ದರು.

ಪದವೀಧರರಾದಮೇಲೆ ಮುಂದಿನ ವಿದ್ಯಾಭ್ಯಾಸದ ಬಗ್ಗೆ ಹಿಂದು ಮುಂದು ನೋಡಬೇಕಾಗಿರಲಿಲ್ಲ. ಸುಪ್ರಸಿದ್ಧ ವಕೀಲರ ಮಗನಾಗಿದ್ದುದರಿಂದ ತಂದೆಯ ಹಾದಿಯನ್ನೇ ತುಳಿಯಬೇಕೆಂಬ ಕುತೂಹಲಬಂತು. ಮದರಾಸಿಗೆ ಹೋಗಿ ೧೯೧೯ ರಲ್ಲಿ ಬಿ. ಎಲ್. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಬಿ. ಎ. ಬಿ. ಎಲ್. ಪದವಿ ಪಡೆದು ವಕೀಲಿ ವೃತ್ತಿಗಾರಂಭಿಸಿದರು. ವೃತ್ತಿ ಆರಂಭಿಸಿದುವೇ ತಡ; ಸರ್ವತೋ ಮುಖವಾಗಿ ಅಭಿವೃದ್ಧಿ ಹೊಂದಲಾರಂಭಿಸಿದರು.

**ಆ ಮಾತಿನ ಚಾತುರ್ಯವೇ ಬೇರೆ**

ಭಾಷ್ಯಂರವರೊಡನೆ ಕುಳಿತು ಮಾತನಾಡುವುದೆಂದರೆ ಹಬ್ಬದ ಊಟವಿದ್ದಂತೆ. ಒಂದು ವಿಚಾರವಲ್ಲ, ಒಂದು ದೇಶವಲ್ಲ, ಒಂದು ಪುರಾಣವಲ್ಲ, ಜಗತ್ತಿನ ಸರ್ವ ವಿಷಯಗಳೂ ಮುಂದೆಬಂದು ಕುಳಿತಂತೆ. ಅವರ ಜ್ಞಾನ ಭಂಡಾರ ಅಷ್ಟೊಂದು ದೊಡ್ಡದು. ಯಾವ ವಿಚಾರ ಕೇಳಿದರೂ ಸಿದ್ಧವಾದ ಉತ್ತರ. ತಡೆಬಡೆಯಿಲ್ಲದ ಮಾತು. ಅವರಮಾತಿನ ಚಾತುರ್ಯವೇಬೇರೆ. ಮತ್ತಿನ್ನಾರ ಮಾತಿಗೂ ಆ ಠೀವಿ, ಆ ಮೆರುಗು ಬರಲಾರದು. ಜೊಳ್ಳು ಹರಟೆಯನ್ನು ಹೊಡೆಯುವ ಅಭ್ಯಾಸ ಅವರಿಗಿಲ್ಲ. ಹರಟೆಯೊಡೆದರೂ ಅಲ್ಲಿಯೂ ವಿಚಾರ ವಿನಿಮಯ, ಬೋಧಕಬುದ್ಧಿ; ವ್ಯಾಸಂಗ ಗೋಷ್ಠಿಯಲ್ಲಿ ಉಪಾಧ್ಯಾಯರಿದ್ದಂತೆ.

ಐಯ್ಯಂಗಾರರಿಗೆ ತಿಳಿಯದ ವಿಷಯವಿಲ್ಲ, ಗೊತ್ತಿಲ್ಲದ ಸಂಗತಿಯಿಲ್ಲ; ವೇದಾಂತದಿಂದ ವಿಜ್ಞಾನದ ವರೆವಿಗೂ ಹಸ್ತ ಸಾಮುದ್ರಿಕೆಯಿಂದ ಅರ್ಥ

ಶಾಸ್ತ್ರದವರೆವಿಗೂ, ರಂಗಭೂಮಿಯಿಂದ ರಾಜಕೀಯದ ವರೆವಿಗೂ, ಸಾಹಿತ್ಯ ದಿಂದ ಪತ್ರಿಕೋದ್ಯಮದ ವರೆವಿಗೂ ಎಲ್ಲವನ್ನೂ ಬಲ್ಲವರಾಗಿದ್ದಾರೆ. ಅವರ ವಿಷಯಸಂಗ್ರಹ ಅಷ್ಟೊಂದು ವ್ಯಾಪಕ; ಅಷ್ಟೊಂದು ಪ್ರಭಾವಯುತ. ಎಲ್ಲ ವನ್ನೂ ಕರತಲಾಮಲಕ ಮಾಡಿಕೊಂಡಿದ್ದಾರೆ. ನುಂಗಿ ನೀರುಕುಡಿದಂತಲ್ಲ. ಅಗಿದು ಅರಗಿಸಿಕೊಂಡಂತೆ—ಅವರ ತಿಳಿವಳಿಕೆ

ವಕೀಲಿ ವೃತ್ತಿಯಲ್ಲಿ[1] ಎತ್ತಿದ ಕೈ ಭಾಷ್ಯಂ. ವಾದಕ್ಕೆ ನಿಂತರೆ ನ್ಯಾಯ ಮೂರ್ತಿಗಳು ಡಂಗಾಗಿ ಹೋಗುತ್ತಿದ್ದರು; ಇವರ ವಾಕ್ಚಾತುರ್ಯಕಂಡು ಸಹೋ ದ್ಯೋಗಿಗಳೆಲ್ಲಾ ಬೆಚ್ಚು ಬೆರಗಾಗುತ್ತಿದ್ದರು. ಎಷ್ಟೋ ವಕೀಲರುಗಳು ಅಸಾಧ್ಯವೆಂದು ತಿಳಿದಿದ್ದ ಮೊಕದ್ದಮೆಗಳಲ್ಲಿ ಇವರು ಸುಲಭವಾಗಿ ವಿಜಯ ಪಡೆಯುತ್ತಿದ್ದರು. ವಕೀಲಿ ವೃತ್ತಿಯಲ್ಲಿ ಅಗ್ರಗಣ್ಯರೆನಿಸಿದ ಇವರ ತಂದೆಯವ ರನ್ನೂ ಮೀರಿಸುವ ಶಕ್ತಿ ಇವರದು. ಆದರೆ ಅದರ ಉಪಯೋಗ ಮಾತ್ರ ಆಗಲಿಲ್ಲ. ರಾಜಕೀಯ ಇವರ ರಕ್ತದಲ್ಲಿ ಸೇರಿ ಹೋಗಿದ್ದುದರಿಂದ ವಕೀಲಿ ಕೆಲಸವನ್ನು ಸರಿಯಾಗಿ ನಡೆಯಿಸಲಿಲ್ಲ.

## ಹೃದಯದ ಆಂದೋಳನ

ವಕೀಲಿ ವೃತ್ತಿ ಆರಂಭಿಸಿದ ೭—೮ ವರ್ಷಗಳಲ್ಲಿ ಬ್ರಿಟಿಷ್ ಭಾರತದ ಆಂದೋಳನವನ್ನು ನೋಡಿ ಭಾಷ್ಯಂರವರ ಹೃದಯ ತಳಮಳಗುಟ್ಟಿತು. ದೇಶ ಕ್ಕಾಗಿ ತನ್ನಿಂದ ಸಾಧ್ಯವಾದುದನ್ನು ಮಾಡಬೇಕೆಂದು ಸಂಕಲ್ಪಮಾಡಿದರು. ಅದರ ಮೊದಲನೆಯ ಹೆಜ್ಜೆಯಾಗಿ ೧೯೨೨ರಲ್ಲಿ ಕಾಂಗ್ರೆಸ್ ಸದಸ್ಯರಾದುದ ಲ್ಲದೆ ಅಂದಿನಿಂದಲೇ ಖಾದಿಧಾರಿಗಳಾದರು. ಅಂದಿನಿಂದ ಇಂದಿನ ವರೆವಿಗೂ ಕಾಂಗ್ರೆಸ್ ಅಲ್ಲದೆ ಮತ್ತಿನ್ನಾವ ರಾಜಕೀಯ ಸಂಸ್ಥೆಗೂ ಸೇರಿಲ್ಲ. ಇಂದು ಇಲ್ಲಿ, ನಾಳೆ ಅಲ್ಲಿ, ಎಂಬುದು ಅವರಿಗೆ ಒಗ್ಗದಮಾತು.

ಭಾಷ್ಯಂ ಬಡವರ ಬಂಧು— ಬಡವರ, ಕೂಲಿಕಾರರ ಕಷ್ಟವನ್ನು ಸಹಿಸ ಲಾರರು. ಬಂಡವಾಳಗಾರರು ಕೂಲಿಕಾರರ ಬೆವರುಸುರಿಸಿ ದುಡಿಸುತ್ತಿರು ವುದನ್ನು ನೋಡಿ ತಡೆಯಲಾರದೆ ಹೋದರು. ಕೂಲಿಕಾರರ ಹೀನಸ್ಥಿತಿ,

ಆಚಾರವಿಚಾರ, ನಡೆನುಡಿ ಇವರ ಕರುಳನ್ನು ಕರಗಿಸಿತು. ಏನಾದರೂ ಮಾಡಿ, ಕೂಲಿಕಾರರ ಸಂಘಟನೆ, ಶಿಸ್ತು, ಸೌಕರ್ಯಗಳನ್ನು ಹೆಚ್ಚಿಸಬೇಕೆಂಬ ಮನಸ್ಸು ಬಂತು. ಬೆಂಗಳೂರು ಹತ್ತಿಗಿರಣಿ ಕೂಲಿಕಾರರನ್ನೆಲ್ಲಾ ಒಂದೆಡೆ ಸೇರಿಸಿದರು. ಆ ನಿರ್ಭಾಗ್ಯ ಜೀವಗಳಿಗೆ ನೆಮ್ಮದಿಯಾಗಬೇಕಾದರೆ ಸಂಘಟನ ಶಕ್ತಿ ಅವಶ್ಯಕ ಎಂದು ಬೋಧಿಸಿದರು. ಅದರಂತೆ ೧೯೩೯ ರಲ್ಲಿ ಸಂಘ ಸ್ಥಾಪಿತವಾಯಿತು. ಕೂಲಿಕಾರರ ಬೇಡಿಕೆಯನ್ನು ಮನ್ನಿಸಿ ಆ ಸಂಘಕ್ಕೆ ಇವರೇ ಅಧ್ಯಕ್ಷರಾದರು. ಕೆಲಸಗಾರರು ಇವರನ್ನು ಅರಗಳಿಗೆ ಕೂಡ ಅಗಲಿರಲು ಇಷ್ಟಪಟ್ಟಿಲ್ಲ. ಈಗಲೂ ಇವರೇ ಆ ಸಂಘದ ಅಧ್ಯಕ್ಷರಾಗಿದ್ದಾರೆ.

ಕೂಲಿಕಾರ ಚಳುವಳಿಯ ಸಂಬಂಧವಾಗಿ ಐಯ್ಯಂಗಾರ್ಯರಿಗೆ ಅನೇಕ ವೇಳೆ ದಸ್ತಗಿರಿಗಳಾಗಿವೆ; ಶಿಕ್ಷೆಗಳಾಗಿವೆ. ಸರ್ಕಾರಕ್ಕೂ, ಸಂಘಕ್ಕೂ, ಹಣಾ ಹಣಿಯಾಗಿದೆ. ಆದರೂ ಇವರು ಜಗ್ಗಿಲ್ಲ. ಮೈಸೂರು ಸಂಸ್ಥಾನದಲ್ಲಿ ಕೂಲಿ ಕಾರರ ಚಳುವಳಿ ಬೆಳೆದಿದ್ದರೆ ಅದು ಭಾಷ್ಯಂರವರ ಪ್ರಭಾವ. ಕೂಲಿಕಾರ ಸಂಸ್ಥೆ ಬಲಪಟ್ಟು, ಕೂಲಿಕಾರರಿಗೆ ಉಪಕಾರವಾಗಿದ್ದರೆ ಅದು ಅವರ ದುಡಿತದ ಫಲ. ಹಗಲಿರುಳು ದೇಹಶ್ರಮ ಲಕ್ಷಿಸದೆ ಆ ಸಂಘಕ್ಕೆ ಬೆವರು ಸುರಿಸಿ ದುಡಿದಿದ್ದಾರೆ. ಕೂಲಿಕಾರರೇ ಅವರ ಪ್ರೀತಿಯಬಳಗ. ಈಗಲೂ ಆ ನಿರ್ಭಾಗ್ಯ ಸೋದರರಿಗಾಗಿ ಅವರು ಸರ್ವಸ್ವವನ್ನೂ ಅರ್ಪಿಸಲು ಸಿದ್ಧರಿದ್ದಾರೆ.

ಭಾಷ್ಯಂ ಬಹಳ ಬಡತನ ಅನುಭವಿಸಿದವರೆಂಬುದು ಅನೇಕರಿಗೆ ತಿಳಿದಿಲ್ಲದಿರಬಹುದು. ಅವರಿಗೂ ಬಡತನದ ಬೇಗೆ ಬಡಿದಿತ್ತು, ಕಷ್ಟದ ಕಾವು ತಗುಲಿತ್ತು. ಹೊಸಬಟ್ಟೆ ಉಡುವುದೇ ಅವರಿಗೊಂದು ಹಬ್ಬವಾಗಿತ್ತಂತೆ. ಅಂತಹ ಕಷ್ಟ ಅನುಭವಿಸಿ ಉನ್ನತಿಗೇರಿದ ಮಹಾನುಭಾವ ಭಾಷ್ಯಂ. ಆದ್ದರಿಂದಲೇ ಅವರ ಕರುಳು ಬಡವರಿಗಾಗಿ ಬಲು ಮರುಗುವುದು.

### ರಸಿಕತನದ ನಗುಮುಖ

ಭಾಷ್ಯಂರವರು ಅದ್ಭುತ ಮೇಧಾವಿಗಳು. ತ್ಯಾಗ, ನಿಷ್ಠೆ, ಗಾಂಭೀರ್ಯಗಳು ಅವರ ಸ್ವಭಾವದಲ್ಲಿ ತುಂಬಿವೆ. ಹೃದಯದಕಾವು ನೋವುಗಳನ್ನು, ಮಾಡಿರುವ ಸೇವೆಯನ್ನು ಸ್ಪಷ್ಟವಾಗಿ ತಿಳಿಸುವ ಮುಖಬಿಂಬ. ವಿಶಾಲವಾದ

ಹಣೆ, ಇತರರ ಇಂಗಿತವನ್ನು ತಿಳಿದುಕೊಂಡೆನೆಂದು ಹೇಳುವ ತಿಳಿಗಣ್ಣು ಗಳು; ತುಂಬಿದಗಲ್ಲ; ಮುಖಕ್ಕೆ ಒಪ್ಪುವ ಮೂಗು; ಬಲವಾದ ಮೈಕಟ್ಟು; ಸಾಧಾರಣ ಎತ್ತರ; ವಿಶಾಲವಾದ ಎದೆ; ಸ್ವಲ್ಪವೂ ಕೊಳೆಯಿಲ್ಲದ ಸ್ವಚ್ಛ ಬಿಳಿಯ ಉಡುಪು—ಇದು ಭಾಷ್ಯಂರವರು ಕಂಡುಬರುವ ರೀತಿ. ಹಿಡಿಸ ಲಾರದಷ್ಟು ವಿಷಯ ಸಂಗ್ರಹ ಮಾಡಿದುದರ ಫಲವಾಗಿ ಮುಂದಲೆಯ ಕೂದಲುಗಳೆಲ್ಲಾ ಮಾಯವಾಗಿ ತಾಮ್ರದ ಚಂಬಿನಂತೆ ಮಿಂಚುತ್ತಿರುತ್ತದೆ ಆ ತಲೆ. ರಸಿಕತನದ ಮೃದು ಹಾಸವನ್ನು ಸೂಸುವ ನಗೆ ಅವರ ಮೋರೆ ಯಲ್ಲಿ ಸದಾ ಕಂಡುಬರುತ್ತದೆ. ಅನೇಕವೇಳೆ ಅದು ಮಾಯವಾಗಿ ಮುಖದಲ್ಲಿ ಗಂಭೀರ ಠೀವಿಯು ಅನವಶ್ಯಕವಾಗಿ ಬಂದು ಕೂಡುವುದೂ ಉಂಟು.

ಭಾಷ್ಯಂರವರ ರಾಜಕೀಯ ಚತುರತೆ, ಧುರೀಣತೆ ಅಸಮಾನವಾ ದವು. ಅವರ ಚತುರೋಪಾಯ ಅನೇಕವೇಳೆ ಮಿತ್ರಪಕ್ಷವನ್ನು ಅಚ್ಚರಿಗೊಳಿಸಿ ದಂತೆ ಶತ್ರುಪಕ್ಷವನ್ನು ಬೆಪ್ಪುಗೊಳಿಸಿದೆ. "ಯುದ್ಧರಂಗದಲ್ಲಿ ನಿಂತ ಯೋಧ, ರಾಜಕೀಯ ರಂಗದಲ್ಲಿ ನಿಂತ ರಾಜಕಾರಣಪಟು ಇಬ್ಬರು ಒಂದೇ. ಯೋಧ ತನ್ನ ಗುರಿಮುಟ್ಟಲು ಸಮಯ ಒದಗಿದಂತೆ ಅಸ್ತ್ರಶಸ್ತ್ರಗಳ ಪ್ರಯೋಗ ಬದಲಾಯಿಸುತ್ತಾನೆ. ಅಂತೆಯೇ ರಾಜಕಾರಣ ಪಟು ಕಾಲಕ್ಕೆ ಸರಿಯಾಗಿ ತನ್ನ ಮಾರ್ಗ ಬದಲಾವಣೆಮಾಡುತ್ತಿರಬೇಕು. ಸನ್ನಿವೇಶಕ್ಕೆ ತಕ್ಕಂತೆ ತನ್ನ ಹಿಡಿತವನ್ನು ಬಿಗಿ, ಸಡಿಲಮಾಡುತ್ತಿರಬೇಕು. ಶಿಸ್ತು ತಪ್ಪದೆ, ನೀತಿತಪ್ಪದೆ, ಗುರಿಮುಟ್ಟುವುದೇ ಅವನ ಧ್ಯೇಯ. ಅದನ್ನು ತಪ್ಪದೆ ತಲುಪಲು ಹತ್ತು ಮಾರ್ಗ." ಎಂದು ಭಾಷ್ಯಂರವರ ವಾದ. ಒಂದೇ ವಿಚಾರದಲ್ಲಿ ಒಂದೊಂದುಸಲ ಒಂದೊಂದು ಮಾರ್ಗತೋರಿಸಿ ಹಲವರ ಅಸಮಾಧಾನಕ್ಕೆ ಗುರಿಯಾಗಿದ್ದಾರೆ. ಶ್ರೀ. ಭಾಷ್ಯಂರವರ ಅದಲುಬದಲು ವಿದ್ಯೆ ಅನೇಕರಿಗೆ ಒಗ್ಗದು, ಸಹಿಸದು.

## ಶಾಸನಸಭೆಗಳಲ್ಲಿ ಸಮ್ಮೇಳನಗಳಲ್ಲಿ

೧೯೨೭-೧೯೩೯ ರ ವರೆವಿಗೂ ಒಂದೇಸಮನೆ ೧೨ ವರ್ಷಗಳಕಾಲ ಪ್ರಜಾಪ್ರತಿನಿಧಿ ಸಭೆಯಲ್ಲಿ ಸದಸ್ಯರಾಗಿ ದುಡಿದಿದ್ದಾರೆ. ಆ ಸಭೆಯಲ್ಲಿ ಕಂಡುಬರುತ್ತಿದ್ದ ಕೋಮುವಾರು ಭೂತಗಳನ್ನು ಪ್ರತಿಭಟಿಸುವ ಸಲುವಾಗಿ

ಸಭೆಯಲ್ಲಿ "ಪ್ರೋಗ್ರೆಸೀವ್ ಪಾರ್ಟಿ" ಎಂಬ ಪಕ್ಷವನ್ನು ಕಟ್ಟಿ ಅದರ ನಾಯಕರಾಗಿ ಕೆಲಸಮಾಡಿದ್ದಾರೆ. ೩ ವರ್ಷಗಳಕಾಲ ನ್ಯಾಯವಿಧಾಯಕ ಸಭೆಯಲ್ಲೂ ಒಂಭತ್ತುವರ್ಷಗಳಕಾಲ ಬೆಂಗಳೂರು ಪೌರಸಭೆಯಲ್ಲೂ ಸೇವೆ ಸಲ್ಲಿಸಿದ್ದಾರೆ.

ಅನೇಕರಂತೆ ಕೈಕಟ್ಟಿ ಕುಳಿತುಕೊಳ್ಳುವ ಸದಸ್ಯತನವಲ್ಲ ಭಾಷ್ಯಂರವರದು. ಪ್ರತಿವಿಷಯವನ್ನೂ, ಚರ್ಚೆಯನ್ನೂ, ನಿರ್ಣಯವನ್ನೂ ಚೆನ್ನಾಗಿ ವಿಮರ್ಶಿಸಿ ಮಾತನಾಡುವುದು ಅವರ ಪದ್ಧತಿ. ಮಾತನಾಡಲು ಎದ್ದು ನಿಂತರೆ ಬೇಡವೆನ್ನುವ ಎದುರಾಳಿಗಳೂ ಬೇಕೆನ್ನುವ ಮಟ್ಟಕ್ಕೆ ಬರುವಂತೆ ಮಾಡುವ ತರ್ಕಶಕ್ತಿ, ವಿಚಕ್ಷಣ ವಾಕ್ಸರಣಿ. ಸರ್ಕಾರವು ಮಾಡಿದ ತಪ್ಪುಗಳನ್ನು ಎತ್ತಿತೋರಿಸಿ, ಒಪ್ಪಿಸಿ ಎಷ್ಟೋಸಲ ತಿದ್ದುಪಡಿ ಮಾಡಿಸಿದ್ದಾರೆ- ಅಂತಹ ಶಕ್ತಿ ಅವರದು.

ಭಾಷ್ಯಂರವರು ಭಾಗವಹಿಸಿರುವ ಸಮ್ಮೇಳನಗಳು, ಸಭೆಗಳನ್ನು ತಿಳಿಸಬೇಕಾದರೆ ದೊಡ್ಡದೊಂದು ಪಟ್ಟಿಯನ್ನೇ ತಯಾರಿಸಬೇಕಾಗುತ್ತದೆ. ಅಷ್ಟೊಂದರಲ್ಲಿ ಅವರ ಪಾತ್ರ. ಬೇಕಾದಷ್ಟು ಕೂಲಿಕಾರ ಸಮ್ಮೇಳನಗಳ ಅಧ್ಯಕ್ಷತೆವಹಿಸಿದ್ದಾರೆ. ಭಾಷ್ಯಂರವರನ್ನು ಕಂಡರೆ ಕೂಲಿಕಾರರಷ್ಟೇ ತರುಣವರ್ಗಕ್ಕೂ ಪ್ರೀತಿ. ಆದ್ದರಿಂದಲೇ ಎಲ್ಲಾತರುಣ ಸಮ್ಮೇಳನಕ್ಕೂ ಇವರಿಗೆ ಆಹ್ವಾನ. ಧರ್ಮಾವರ, ಮಂಗಳೂರು, ಧಾರವಾಡ, ಮೈಸೂರು, ಅಜ್ಜಂಪುರ ಮುಂತಾದ ಕಡೆಗಳಲ್ಲಿ ನಡೆದ ತರುಣ ಸಮ್ಮೇಳನಗಳಲ್ಲಿ ಅಧ್ಯಕ್ಷತೆ ವಹಿಸಿ, ತರುಣರಿಗೆ ಇವರು ಇತ್ತಿರುವ ಸಂದೇಶಗಳು ಅಪೂರ್ವವಾದವು. ಕೊಚ್ಚಿನ್, ಮಾಯವರಗಳಲ್ಲಿ ನಡೆದ ಪರಿಷತ್ತುಗಳ ಉದ್ಘಾಟನ ಸಮಾರಂಭ ನಡೆಸಿದ್ದಾರೆ. ೧೯೪೦ ರಲ್ಲಿ ಮಿರಜ್ ಸಂಸ್ಥಾನದಲ್ಲಿ ನಡೆದ ಪ್ರಜಾಪರಿಷತ್ತಿನ ಅಧ್ಯಕ್ಷತೆಯನ್ನೂ ೧೯೩೪ ರಲ್ಲಿ ನಡೆದ ಮೈಸೂರು ಸಂಸ್ಥಾನದ ವಕೀಲರ ಸಮ್ಮೇಳನದ ಅಧ್ಯಕ್ಷತೆಯನ್ನೂ ವಹಿಸಿದ್ದಾರೆ.

ಭಾಷ್ಯಂರವರ ಮನೆಗೆ- ಕಚೇರಿಗೆ- ಹೋಗಿ ನೋಡಬೇಕು. ಯಾವಾಗಲೂ ಗಜಿಬಿಜಿ, ಸಡಗರ—ಕಚೇರಿ ತುಂಬಿರುತ್ತದೆ. ದಿವಾನರ ಕಚೇರಿಯಂತಲ್ಲ; ನವಾಬರ ದರ್ಬಾರು ಇದ್ದಂತೆ. ಎಡಭಾಗದಲ್ಲಿ ಒಂದು ಸಾಲು ಬಲಭಾಗದಲ್ಲಿ ಒಂದು ಸಾಲು, ಅಕ್ಕಪಕ್ಕದಲ್ಲಿ ಒಬ್ಬಿಬ್ಬರು, ಮಧ್ಯೆ ಭಾಷ್ಯಂ.

ಬರುವವರು ಬರುತ್ತಿರುತ್ತಾರೆ. ಹೋಗುವವರು ಹೋಗುತ್ತಿರುತ್ತಾರೆ. ಒಂದು ಕಡೆ ಕಾಂಗ್ರೆಸ್ ನಾಯಕರ, ಕೆಲಸಗಾರ ಕೂಟ. ಇನ್ನೊಂದು ಕಡೆ, ಹಿಂದೀಪ್ರಚಾರ ಸಂಘದವರೋ, ಚರಕ ಸಂಘದವರೋ ಕುಳಿತಿರುತ್ತಾರೆ. ಮತ್ತೊಂದೆಡೆ ಗಿರಣಿ ಕೆಲಸಗಾರರ ಪ್ರತಿನಿಧಿಗಳು ಬಂದಿರುತ್ತಾರೆ. ಹೀಗೆ ಅವರ ಕಚೇರಿಯಲ್ಲಿ ಎಲ್ಲಾ ಜನರ ಕಲಸುಮೇಲೋಗರ. ಅವರೆಲ್ಲರೊಡನೆಯೂ ಭಾಷ್ಯಂ ಲೀಲಾಜಾಲವಾಗಿ ಮಾತನಾಡುತ್ತಿರುತ್ತಾರೆ. ಎಲ್ಲರ ಪ್ರಶ್ನೆಗೂ ಉತ್ತರವೀಯುತ್ತಿರುತ್ತಾರೆ. ಈಮಧ್ಯೆ ಪತ್ರಿಕಾಪ್ರತಿನಿಧಿ ಬಂದರೆ, ಅವನನ್ನೂ ಸ್ವಾಗತಿಸಿ, ಅವನೊಡನೆಯೂ ಮಧುರವಾಗಿ, ಹಿತವಾಗಿ ಚರ್ಚೆ ನಡೆಯಿಸುತ್ತಿರುತ್ತಾರೆ. ಇವುಗಳ ಮಧ್ಯೆ ಟೆಲಿಫೋನ್ ಸಂಭಾಷಣೆ ಬೇರೆ. ಈ ರೀತಿ ಎಲ್ಲರಿಗೂ ತೃಪ್ತಿಕರವಾದ ಉತ್ತರವೀಯಬಲ್ಲ ಚುರುಕು ನಾಲಿಗೆ ಅವರದು.

ಅವರ ಉದಾರತೆ ಉನ್ನತಮಟ್ಟದ್ದು; ತುಂಬುಹೃದಯದ್ದು. ಕೂಡಿಡುವ ಮಾತೇ ಇಲ್ಲ. ಸಂಗ್ರಹಣ ಗುಣ ಅವರ ಬಳಿಗೆ ಬಂದಿಲ್ಲ. 'ಭಿಕ್ಷಾಂದೇಹಿ' ಎಂದು ಬಂದವರಿಗೆ ಇಲ್ಲವೆನ್ನುವ ಮಾತೇಯಿಲ್ಲ. ದಾನಮಾಡುವುದರಲ್ಲಿ ಎತ್ತಿದಕೈ. ತಮಗೆ ಇಲ್ಲದಿದ್ದರೂ ಹಿಂದುಮುಂದು ನೋಡದೆ ಕೊಟ್ಟುಬಿಡುವ ಸ್ವಭಾವ. ಉಡಲು ಬಟ್ಟೆಯಿಲ್ಲವೆಂದು ಬಂದವರಿಗೆ ಹಾಕಿಕೊಳ್ಳುವ ಕೋಟು, ಷರಟುಗಳನ್ನು ಎತ್ತಿಕೊಟ್ಟ ಪ್ರಸಂಗಗಳು ಎಷ್ಟೋ ಇವೆ. ಹೊಲೆಯಬರಲಿ, ಬ್ರಾಹ್ಮಣಬರಲಿ; ಕಳ್ಳಬರಲಿ, ಸುಳ್ಳಬರಲಿ ಕೈಜೋಡಿಸಿ ಕೇಳಿದರೆ ಮನೆಯ ಒಳಗಿಂದ ಹಣತರಿಸಿ ಕೊಟ್ಟು ಕಳುಹಿಸುವುದು ಅವರ ಪದ್ಧತಿ. ಅದು ಅವರ ತಂದೆಯವರಿಂದ ಕಲಿತ ಪಾಠವಿರಬೇಕು. ಅವರ ತಂದೆ ಬೇಕಾದಷ್ಟು ಸಂಪಾದನೆಮಾಡಿ, ಕೇಳಿದವರಿಗೆಲ್ಲಾ ಕೊಟ್ಟು ಕಳೆದುಕೊಂಡು ಮಗನಿಗೆ ಸಾಲಕಟ್ಟಿ ಹೋದರಂತೆ. ಭಾಷ್ಯಂ ಅದನ್ನೆಲ್ಲಾ ತೀರಿಸಿ ತಂದೆಯಂತೆಯೇ ದಾನಶೂರರಾಗಿದ್ದಾರೆ. ತಂದೆಯಂತೆ ಭಾಷ್ಯಂ, ತನ್ನ ಮಗನ ತಲೆಗೆ ಸಾಲ ಕಟ್ಟುವಂತಿಲ್ಲ, ಕಟ್ಟಲು ಮಕ್ಕಳೂ ಇಲ್ಲ.

### ಏಳುಬಾರಿ ಕಾರಾಗೃಹ

ಇವರ ಕೀರ್ತಿಯ ಗೋಪುರಕ್ಕೆ ಕಲಶವಿಟ್ಟದ್ದೆಂದರೆ ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷಸ್ಥಾನ ಇವರಿಗೆ ದೊರೆತುದು. ೧೯೪೦–೪೧ ರಲ್ಲಿ ಇವರು

ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು. ಅದರ ಹಿಂದಿನ ವರ್ಷ ಸತ್ಯಾಗ್ರಹಹೂಡಿ ಕಾಂಗ್ರೆಸ್ ಜಯಭೇರಿಹೊಡೆದಿತ್ತು. ಭಾಷ್ಯಂ ಅಧ್ಯಕ್ಷ ಪಟ್ಟಕ್ಕೆ ಬಂದವೇಳೆ ನೂರಾರುಜನ ಕಾಂಗ್ರೆಸ್ಸಿನವರು ಇನ್ನೂ ಸೆರೆಮನೆಯಲ್ಲಿದ್ದರು. ಆದರೂ ಕಾಂಗ್ರೆಸ್‌ನಲ್ಲಿ ನವಚೈತನ್ಯವಿತ್ತು. ಭಾಷ್ಯಂ ತಮ್ಮ ಅಧ್ಯಕ್ಷತೆಯ ಕಾಲದಲ್ಲಿ ಕಾಂಗ್ರೆಸ್ಸಿನ ಚರಿತ್ರೆಯಲ್ಲಿ ಹೊಸಯುಗವನ್ನೇ ಸ್ಥಾಪಿಸಿದರು.

ಮೈಸೂರು ಕಾಂಗ್ರೆಸ್ಸಿನ ಮುಂದಾಳುಗಳಪೈಕಿ ಭಾಷ್ಯಂರವರು ಕಾರಾಗೃಹವನ್ನು ಕಂಡಷ್ಟುವೇಳೆ ಮತ್ತಿನ್ನಾರೂ ಕಂಡಿಲ್ಲ. ರಾಜಕಾರಣಕ್ಕಾಗಿ ದಸ್ತಗಿರಿ ಎಂದರೆ ಅಲ್ಲಿ ಭಾಷ್ಯಂರವರೂ ಇದ್ದಾರೆಂದೇ. ಪ್ರಥಮತಃ ೧೯೨೯ ರಲ್ಲಿ ಕೂಲಿಕಾರ ಚಳುವಳಿಯಸಂಬಂಧವಾಗಿ ದಸ್ತಗಿರಿಯಾಯಿತು. ಒಂದು ಮೊಕದ್ದಮೆಯಲ್ಲಿ ಬಿಡುಗಡೆ ಪಡೆದರು. ಮತ್ತೊಂದು ಮೊಕದ್ದಮೆಯಲ್ಲಿ ಶಿಕ್ಷೆಯಾಯಿತು. ಆದರೂ ಹೈಕೋರ್ಟಿನಲ್ಲಿ ಅದು ವಜಾ ಮಾಡಲ್ಪಟ್ಟಿತು. ೧೯೩೭ ರಲ್ಲಿ ರಾಜದ್ರೋಹಕ್ಕೆಂದು ನಡುರಾತ್ರಿಯಲ್ಲಿ ದಸ್ತಗಿರಿ ಮಾಡಲ್ಪಟ್ಟು ನಾಲ್ಕೂವರೆ ತಿಂಗಳ ನಂತರ ಅನಿರೀಕ್ಷಿತವಾಗಿ ಬಿಡುಗಡೆಯಾಯಿತು. ಶಿವಪುರದಲ್ಲಿ ನಡೆದ ಧ್ವಜ ಸತ್ಯಾಗ್ರಹ ಸಂಬಂಧವಾಗಿ ದಸ್ತಗಿರಿಯಾಗಿ ಶಿಕ್ಷಿಸಲ್ಪಟ್ಟರು. ೧೯೩೯ ರಲ್ಲಿ ಕೋಲಾರದ ಚಿನ್ನದ ಗಣಿಯಲ್ಲಿ ದಸ್ತಗಿರಿಯಾಗಿ ಮೂರು ತಿಂಗಳು ಕಠಿಣ ಶಿಕ್ಷೆಯನ್ನು ಅನುಭವಿಸಿದರು.

ಮತ್ತೆ ಅದೇವರ್ಷದ ಅಂತ್ಯದಲ್ಲಿ ಮೈಸೂರು ರಕ್ಷಣ ಕಾನೂನುಪ್ರಕಾರ ದಸ್ತಗಿರಿಮಾಡಿ, ಕೆಲವು ದಿನಗಳಲ್ಲೇ ಬಿಡುಗಡೆ ಹೊಂದಿದರು.

೧೯೪೧ ನೇ ಆಗಸ್ಟ್ ತಿಂಗಳಲ್ಲಿ, ಬಿನ್ನೀಮಿಲ್ ಕೆಲಸಗಾರರ ಮುಷ್ಕರ ಸಂಬಂಧವಾಗಿ, ತಿರುಗಿ ದಸ್ತಗಿರಿಯಾಗಿ ಒಂದುವಾರದ ಆನಂತರ ಬಿಡುಗಡೆಯಾಯಿತು. ಮೊನ್ನೆಯ ಪ್ರಚಂಡಗಾಳಿಗೆ ಸಿಕ್ಕಿ ೧೬ ತಿಂಗಳುಗಳಕಾಲ ಸ್ಥಾನಬದ್ಧತೆಯಲ್ಲಿದ್ದರು. ಈ ರೀತಿ ಏಳುಬಾರಿ ಕಾರಾಗಾರವನ್ನು ಕಂಡಿದ್ದಾರೆ. ಆದರೇನು ? ಅವರ ಉತ್ಸಾಹ, ಎದೆಗಾರಿಕೆ, ತ್ಯಾಗಬುದ್ಧಿ ದ್ವಿಗುಣವಾಗುತ್ತಿದೆ. ರಾಷ್ಟ್ರಸೇವೆಗಾಗಿ ಹುಟ್ಟಿದ ಜೀವ, ರಾಷ್ಟ್ರಸೇವೆಯಲ್ಲೇ ಅಳಿಯಲೆಂದು ಅವರ ಬಯಕೆ.

## ಮೋಹಿನಿಮಂತ್ರ ವಿದ್ದಂತೆ

ಭಾಷ್ಯಂರವರ ಭಾಷಣಗಳನ್ನು ಕೇಳಿ ಮೆಚ್ಚದ ಮೈಸೂರು ಪ್ರಜೆ ಇಲ್ಲ. ಅವು ಅಷ್ಟೊಂದು ಸೊಗಸು, ಅಷ್ಟೊಂದುಹಿತ. ಭಾಷಣಗಳಲ್ಲಿ ಅವರು ಎತ್ತಿದ ಕೈ. ಕುಳಿತು ಕೇಳುವವರನ್ನು ಮುಗ್ಧರನ್ನಾಗಿ ಮಾಡಬಲ್ಲ, ಪ್ರೇಕ್ಷಕರ ಮನ ಮುಟ್ಟುವಂತೆ ಮಾತನಾಡಬಲ್ಲ ಶಕ್ತಿ ಇದೆ. ಮಾತನಾಡಲು ನಿಂತರೆ, ಕಲ್ಲು ಬೊಂಬೆಗಳೂ ಸಹ ಕುಣಿಯುವಂತೆ ಮಾತನಾಡುತ್ತಾರೆ. ಅವರ ಮಾತುಗಳು ಗಾಳಿಯಲ್ಲಿನ ಆವಿಯಂತೆ ಆರಿಹೋಗುವುದಿಲ್ಲ. ಕೇಳಿದ ಮಾತುಗಳು ರೂಪುಗೊಂಡು ಸ್ಪಷ್ಟವಾಗಿ ನಿಲ್ಲುತ್ತವೆ. ಸಭಿಕರನ್ನು ಬೆಪ್ಪುಗೊಳಿಸುವ ಗಂಭೀರವಾಣಿ, ಸ್ಪಷ್ಟವಾದ, ಸೊಗಸಾದ, ಶಬ್ದೋಚ್ಚಾರ. ಮಳೆಬಂದು ನಿಂತ ಮೇಲೆ ಹರಿಯುವ ಗಂಗಾನದಿಯಂತೆ, ಇವರ ಭಾಷಣ ಜೋರಾಗಿ ಸರಾಗವಾಗಿ ತಡೆಬಡೆಯಿಲ್ಲದೆ, ಹರಿಯುತ್ತಿರುತ್ತದೆ.

ಕನ್ನಡ, ಇಂಗ್ಲೀಷ್, ತೆಲಗು, ತಮಿಳು ಈ ಎಲ್ಲಾ ಭಾಷೆಗಳಲ್ಲೂ ಚೆನ್ನಾಗಿ ಮಾತನಾಡ ಬಲ್ಲವರಾಗಿದ್ದಾರೆ. ಭಾಷಣಕೇಳಲು ಬಂದವರನ್ನು ಕ್ರೋಧದಿಂದ ಕೆರಳುವಂತೆ ಮಾಡಬಲ್ಲರು. ಕನಿಕರದಿಂದ ಮರುಗುವಂತೆ ಮಾಡಬಲ್ಲರು. ಸಂತೋಷದಿಂದ ನಗುವಂತೆಯೂ ಸಹ ಮಾಡಬಲ್ಲರು. ಅವರ ಮಾತುಗಳು ಮೋಹಿನಿ ಮಂತ್ರವಿದ್ದಂತೆ ಮೋಹಕ. ಅಖಿಲ ಮೈಸೂರು ಕಾಂಗ್ರೆಸ್ ಸಮಿತಿಯ ಮುಂದೆ ಕಾರ್ಯಕಾರಿ ಸಮಿತಿಯ ಠರಾವು ಬಂದು ಅದಕ್ಕೆ ವಿರೋಧ ಕಂಡು ಬಂದಾಗ ಭಾಷ್ಯಂರವರನ್ನು ಮೋಹಿನಿಯಂತೆ ಉಪಯೋಗಿಸಿಕೊಂಡು ಸದಸ್ಯರನ್ನು ಮರುಳುಮಾಡಿದ ಪ್ರಸಂಗಗಳು ಎಷ್ಟೋ ಇವೆ.

ರಾಜಕೀಯವು ಭಾಷ್ಯಂರವರ ಉಸಿರಾದರೂ ಇತರ ರಂಗಗಳಲ್ಲೂ ತಮ್ಮ ಸೇವೆ ನಡೆಯಿಸಿದ್ದಾರೆ. ಹರಿಜನೋದ್ಧಾರಸಂಘ, ಗ್ರಾಮೋದ್ಧಾರಸಂಘ, ಚರಕಾಸಂಘ, ಸಹಕಾರಸಂಘ, ಸಾಹಿತ್ಯಸಂಘ, ಹಿಂದೀಪ್ರಚಾರ ಸಭಾ, ಅನಾಥಾಲಯ ಮುಂತಾದ ಎಲ್ಲಾ ಸಂಸ್ಥೆಗಳಲ್ಲೂ ಇವರಿಲ್ಲದಿಲ್ಲ. ಅನೇಕಾನೇಕ ಸ್ಥಾಯಿ ಸಮಿತಿಗಳಲ್ಲೂ,ವಿಶ್ವ ವಿದ್ಯಾನಿಲಯದ ಸೆನೇಟಿನಲ್ಲೂ, ಹಿಂದೂ ಕಾನೂನು ಸುಧಾರಣ ಸಮಿತಿಯಲ್ಲೂ ಸದಸ್ಯರಾಗಿ ಕೆಲಸಮಾಡಿದ್ದಾರೆ.

"ಮೈಸೂರ್ ಲಾ ಜರ್ನಲ್" ಎಂಬ ಮಾಸಪತ್ರಿಕೆಯ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ. ಭಾಷ್ಯಂರವರು ಮೈಸೂರಿಗೆಮಾತ್ರ ಮುಖಂಡರಾಗಿಲ್ಲ. ದಕ್ಷಿಣಭಾರತದಲ್ಲೆಲ್ಲಾ ತಮ್ಮ ಕೀರ್ತಿಯನ್ನು ಬೆಳೆಸಿಕೊಂಡಿದ್ದಾರೆ. ಅವರ ಹೆಸರು ಹೇಳುತ್ತಿದ್ದಂತೆಯೇ ಹೆಮ್ಮೆಪಡುವ ಲಕ್ಷಾಂತರಮಂದಿ ಜನರು ತಮಿಳು ಮತ್ತು ಆಂಧ್ರಪ್ರಾಂತದಲ್ಲಿ ಇದ್ದಾರೆ. ಅದಕ್ಕೋಸ್ಕರವೇ ಇವರಿಗೆ ಆಗಾಗ್ಗೆ ಆ ಕಡೆಯ ಸಮ್ಮೇಳನ ಮತ್ತು ಸಭೆಗಳಿಗೆ ಆಹ್ವಾನ.

ಭಾಷ್ಯಂರವರಿಗೆ ಓದುವ ಹುಚ್ಚು ಈಗಲೂ ಹೋಗಿಲ್ಲ. ಸಿನಿಮಾ ಸಂಚಿಕೆಯಿಂದ,ವೇದಾಂತದ ವರೆವಿಗೂ,ಯಾವ ಪುಸ್ತಕವೇ ಕೈಲಿಸಿಕ್ಕಲಿ ಓದದೆ ಬಿಡುವುದಿಲ್ಲ. ಪ್ರಶಾಂತ ವಾತಾವರಣದಮೇಲೆ ಅವರಿಗೆ ಹೆಚ್ಚು ಆಸೆ. ಅಂದರೆ ಏಕಾಂತತೆಯನ್ನು ಇಚ್ಛಿಸುವುದಿಲ್ಲ. ರಸಿಕರಾಗಿರುವಂತೆ ಕಲೋಪಾಸ ಕರೂ ಆಗಿದ್ದಾರೆ. ಉಲ್ಲಾಸ ವಿಲಾಸಗಳಲ್ಲಿ ಅಭಿಲಾಷೆ ಉಂಟು. ಅಭಿ ರುಚಿಯೂ ಉಂಟು.

ಊಟಉಪಚಾರಗಳಲ್ಲಿ, ಸ್ನಾನಪಾನಗಳಲ್ಲಿ ನಿಯಮ ಬಹಳ ಹೆಚ್ಚು; ವೈದಿಕ ಬ್ರಾಹ್ಮಣರಂತೆ ಕಟ್ಟು ಕಟ್ಟಳೆಗಳನ್ನಿಟ್ಟುಕೊಂಡಿಲ್ಲ. ಆದರೆ ಶುಚಿ ಶಿಸ್ತುಗಳ ವಿಚಾರದಲ್ಲಿ ಅವರಿಗಿಂತಲೂ ಎಷ್ಟೋ ಹೆಜ್ಜೆ ಮುಂದೆಯೆಂದು ಹೇಳ ಬೇಕು. ಅವರಿಗೆ ಎಲ್ಲಾ ಅಚ್ಚುಕಟ್ಟು, ಸೊಗಸು, ಶಿಸ್ತಾಗಿರಬೇಕು. ಸ್ವಲ್ಪ ಕೊಳಕು, ಅಶುಚಿಗಳನ್ನೂ ಸಹ ಅವರು ಸಹಿಸುವುದಿಲ್ಲ. ಅವರ ಮನ ಸ್ಸಿಗೆಕೊಂಚ ಗಲೀಜು ಕಂಡುಬಂದರೆ, ಜಿಗುಪ್ಸೆಯಾದರೆ ಊಟವನ್ನೇಬಿಟ್ಟಿ ರುವಪ್ರಾಣಿ. ಪ್ರಚಾರ ಪ್ರವಾಸಗಳಲ್ಲಿ ಆ ರೀತಿ ಅವರ ಮನಸ್ಸಿಗೆ ಅಹಿತ ಉಂಟಾಗಿ ಉಪವಾಸ ಮಾಡಿದ ದಿನಗಳು ಅನೇಕವಿದೆ.

### ಇನ್ನೂ ನಂಬುವುದು ಕಷ್ಟವೇ

ದೀನರಿಗೆ, ನಿರ್ಗತಿಕರಿಗೆ, ತಮ್ಮದೇಹವನ್ನು ಅವರು ಮುಡುಪಾಗಿ ಇಟ್ಟಿದ್ದಾರೆ. ಜವಾಬ್ದಾರಿ ಸರ್ಕಾರ ಸ್ಥಾಪನೆಯಾದಹೊರತು ಅವರ ಮನಸ್ಸಿಗೆ ಶಾಂತಿಯಿಲ್ಲ. ಅದಕ್ಕಾಗಿ ತುಂಬಾ ತ್ಯಾಗಮಾಡಿದ್ದಾರೆ. ಮತ್ತಷ್ಟುಮಾಡಲು ಸಿದ್ಧರಿದ್ದಾರೆ. ಸದಾ ಕಾಂಗ್ರೆಸ್‌ಕೆಲಸ, ಪದೇಪದೇ ಜೈಲುವಾಸ, ಜೊತೆಗೆ

ವೃತ್ತಿ ಉಚ್ಚಾಟನೆ, ಇವುಗಳ ಪರಿಣಾಮವಾಗಿ ಇವರು ಎಂತಹಕಷ್ಟಕ್ಕೆ ಗುರಿಯಾದರೆಂಬುದು ಕಣ್ಣೀರು ತರಿಸುವಂತಹುದು. ಭೋಗಜೀವನ ನಡೆಯಿಸುತ್ತಿದ್ದ ಭಾಷ್ಯಂ ಬಹಳ ದುರ್ದಶೆಗೆ ಇಳಿದುಬಿಟ್ಟರು. ಅದನ್ನೆಲ್ಲಾ ಒಳಗೊಳಗೆ ಹುದುಗಿಸಿಕೊಂಡು, ಕಷ್ಟನುಂಗಿಕೊಂಡು ಸಹಿಸುತ್ತಿದ್ದಾರೆ. ಭಾಷ್ಯಂ ಮೈಸೂರು ಸಂಸ್ಥಾನದಲ್ಲಿ ಅಲ್ಲದೆ, ಬ್ರಿಟಿಷ್ ಇಂಡಿಯಾದಲ್ಲಿ ಇದ್ದಿದ್ದರೆ, ಅಖಿಲಭಾರತ ಮುಖಂಡರ ಶ್ರೇಣಿಯಲ್ಲಿ ಸೇರಿ ಹೋಗುತ್ತಿದ್ದರೆಂಬುವುದರಲ್ಲಿ ಸಂಶಯವಿಲ್ಲ. ಅಂತಹ ಯೋಗ್ಯತೆ, ದಕ್ಷತೆ, ವ್ಯಕ್ತಿತ್ವ ಅವರಲ್ಲಿದೆ. ಆದರೂ ಮೈಸೂರನ್ನು ಅವರು ಬಿಟ್ಟಿಲ್ಲ; ಬಿಡುವುದೂ ಇಲ್ಲ. ಇಂತಹ ಅಪ್ರತಿಮ ಮೂರ್ತಿಯ ಬಗ್ಗೆಯೂ ಕೊಂಕುನುಡಿಗಳು ತಪ್ಪಿಲ್ಲ. "ಪಾದರಸದಂತಹ ಮನುಷ್ಯ" "ಬಹಳ ಅಹಂಕಾರ" "ಏನಾದರೂ ನಂಬುವುದುಕಷ್ಟ"ಎನ್ನುವವರಿದ್ದಾರೆ. ಆದರೇನು? ಅವುಗಳನ್ನು ಅವರು ಗಮನಿಸದೆ ಮುಂದುವರಿದಿದ್ದಾರೆ. "ಪೂಜ್ಯ ಗಾಂಧಿಯವರಿಗೇ ಅಪವಾದ ತಪ್ಪಿಲ್ಲ. ನಮ್ಮದೇನು?" ಎಂಬುದು ಅವರ ಮತ.

ಭಾಷ್ಯಂರವರಿಗೆ ಅಧಿಕಾರದಮೇಲೆ ಆಸೆಯೇ ಇಲ್ಲ. ಅಂತಹ ಆಸೆ ಇದ್ದಿದ್ದರೆ ಬಹು ಸುಲಭವಾಗಿ ಉನ್ನತಾಧಿಕಾರಿಗಳಾಗುವ ಅವಕಾಶವಿತ್ತು. ಮೈಸೂರು ಹೈಕೋರ್ಟು ಅವರಿಗೆ ಮಾಲೆ ಹಿಡಿದು ನಿಂತೇ ಇತ್ತು. ಗೇಣು ಹೊಟ್ಟೆಗಾಗಿ ಸ್ವಾತಂತ್ರ್ಯ ತೊರೆದು ದಾಸ್ಯದಮಾಲೆ ಧರಿಸಲು ಸಿದ್ಧರಿಲ್ಲವೆಂದು ತಿಳಿಸಿಯೇ ಬಿಟ್ಟರು. ಸರ್ಕಾರವೂ ಸಹ ಬಲೆ ಬೀಸಿತ್ತು. ಆ ಬಲೆಯನ್ನು ಒಲ್ಲೆನೆಂದಿತು, ಈ ಮೂರ್ತಿ.

ಭಾಷ್ಯಂರವರದು ಗಂಭೀರವಾಗಿ ಬೆಳೆದ ದಿವ್ಯ ಜೀವನ. ಆ ಜೀವನವನ್ನು ಬೆಳಗಿಸಿದುದು ಅವರ ರಾಜಕೀಯ. ದೇಶಕ್ಕಾಗಿ ಅವರು ಸಲ್ಲಿಸಿರುವ ಅಮೋಘ ಸೇವೆ, ಮಾಡಿರುವ ಬಲಿದಾನಗಳನ್ನು ಯಾರೂ ಮರೆಯುವಂತಿಲ್ಲ.

---:0:---



ಹೆಚ್. ಸಿದ್ದಯ್ಯ

# ಎಚ್. ಸಿದ್ದಯ್ಯ

ಶಾಸನ ಸಭೆಯಲ್ಲಿ, ಸಿದ್ದಯ್ಯನವರು ಎದ್ದು ನಿಂತರೆ ಶಾಸನ ಸಭಾಧ್ಯಕ್ಷರ ಮೂಗು ಕೆಂಪಾಗುತ್ತಿತ್ತು ; ಕಣ್ಣು ಕೆರಳುತ್ತಿತ್ತು ; ಅವರು ಕೇಳುತ್ತಿದ್ದ ಪ್ರಶ್ನೆಗಳೂ, ಬಂದ ಉತ್ತರವನ್ನು ಕತ್ತರಿಸಿ ಕೇಳುತ್ತಿದ್ದ ಉಪಪ್ರಶ್ನೆಗಳೂ ಅಂಥವುಗಳು. ಆಗ ಮೈಸೂರು ದಿವಾನರೇ ಶಾಸನ ಸಭಾಧ್ಯಕ್ಷರು-ಸಿದ್ದಯ್ಯನವರ ಪ್ರಶ್ನೆಗಳಿಗೆ ಉತ್ತರ ಕೊಡುವುದೆಂದರೆ ಸರ್ಕಾರವು ಮಾಡುತ್ತಿದ್ದ ಅನ್ಯಾಯ ಅಧರ್ಮಕಾರ್ಯಗಳನ್ನು ಬಯಲಿಗಿಟ್ಟಂತೆಯೇ. ಆದ್ದರಿಂದ ಅವರ ಪ್ರಶ್ನೆ, ಟೀಕೆ, ಖಂಡನೆ ಮತ್ತು ಭಾಷಣಗಳೆಂದರೆ ಸರ್ಕಾರ ಕಿಡಿ ಕಿಡಿಯಾಗುತ್ತಿತ್ತು. ಅವರು ಇಡುತ್ತಿದ್ದ ಗುರಿ ಅಂತಹದು ; ರಾಮಬಾಣ ಬಿಟ್ಟಂತೆ ನೇರವಾಗಿ ಬೀಳಬೇಕಾದ ಅಧಿಕಾರಿಗಳಿಗೆ ಬೀಳುತ್ತಿತ್ತು. ಸರ್ಕಾರದ ವಿವೇಕರಹಿತ ಕಾರ್ಯ ಬಹಿರಂಗವಾಗಬೇಕಾದರೆ ಸಿದ್ದಯ್ಯನವರು ಶಾಸನ ಸಭೆಯಲ್ಲಿ ನಿಂತಾಗ ಎಂಬುದನ್ನು ಮೈಸೂರು ಜನತೆ ಚೆನ್ನಾಗಿ ಅರಿತುಕೊಂಡಿತ್ತು.

**ಬಸವನ ಆಟದ ಗುರುತು**

ಸಿದ್ದಯ್ಯನವರು ಶಿವಮೊಗ್ಗಾ ಜಿಲ್ಲೆಯ ಚನ್ನಗಿರಿಯಲ್ಲಿ ೧೯೦೧ ನೆ ಇಸವಿ ಜುಲೈ ೨೭ ನೆಯ ತಾರೀಖಿನಲ್ಲಿ ಜನಿಸಿದರು. ಬಾಲ್ಯಾವಸ್ಥೆಯನ್ನು ಚನ್ನಗಿರಿಯಲ್ಲೇ ಕಳೆದರು. ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸ ಸಹ ಅಲ್ಲೇ ನಡೆಯಿತು. ಬಾಲ್ಯದಿಂದಲೂ ಒಂದೆಡೆ ಕುಳಿತು ಕಾಲ ಕಳೆಯುವ ಜೀವವಲ್ಲ. ಏನಾದರೊಂದು ಮಾಡುತ್ತಲೇ ಇರಬೇಕು. ಒಮ್ಮೆ ಇವರು 'ಬಸವನ ಆಟ' ಆಡಿಸುವೆನೆಂದು ಒಂದು ಹೋರಿಯನ್ನು ಹಿಡಿದು ಆಟವಾಡಿಸುತ್ತಿದ್ದರು. ಸುತ್ತಲೂ ಹುಡುಗರು ಗುಂಪುಕಟ್ಟಿಕೊಂಡು ಆ ಬಸವನ ಆಟ ನೋಡುತ್ತಿದ್ದರು. ಅದು ಗಟ್ಟಿಮುಟ್ಟಾದ ಗೂಳಿ. ಆದರೂ ಈ ಹುಡುಗನಿಗೆ ಹೆದರಿಕೆ ಇರಲಿಲ್ಲ. ಆಡಿಸುತ್ತಿರುವಾಗ ಅದರ ಕೊಂಬಿನ ಮೇಲೆ ತಮ್ಮ ಗಲ್ಲವನ್ನಿಟ್ಟು 'ಬಸವಾ ಮೇಲಕ್ಕೆ ಎತ್ತು' ಎಂದು ಗೂಳಿಗೆ

ಹೇಳಿದರು. ಅವು ರಭಸದಿಂದ ಮೇಲಕ್ಕೆತ್ತಿತು. ಇದರ ಪರಿಣಾಮವಾಗಿ ಮುಖವೆಲ್ಲಾ ರಕ್ತಮಯವಾಗಿ ಗಲ್ಲ ಇಬ್ಭಾಗವಾಯ್ತು. ಹುಡುಗ ರಕ್ತಧಾರೆ ಯೊಡನೆ ನೆಲಕ್ಕೆ ಬಿದ್ದ. ಅದೇ ಈಗಲೂ ಅವರ ಗಲ್ಲದಮೇಲೆ ಕಾಣುವ ಅರ್ಧ ಚಂದ್ರಾಕಾರದ ಗುರುತು.

ಸಿದ್ದಯ್ಯನವರಿಗೆ ಅಸದೃಶ ಜ್ಞಾಪಕಶಕ್ತಿ. ಅಂಕಿ ಅಂಶಗಳನ್ನು ಮರೆಯುವಂತಿಲ್ಲ. ಕಿವಿಯಲ್ಲಿ ಕೇಳಿದ ಮಾತು, ಕಣ್ಣಲ್ಲಿ ನೋಡಿದ ನೋಟ ಕೊನೆಯತನಕ ನೆನಪೇ. ಅದಕ್ಕೆ ಭಾಷಣಗಳಲ್ಲಿ ಅವರು ಕೊಡುವ ಆಡಳಿತದ ಅಂಕಿಅಂಶಗಳೇ ಸಾಕ್ಷಿ. ಮೈಸೂರು ರಾಜ್ಯಾಡಳಿತಕ್ಕೆ ಸಂಬಂಧಿಸಿದ ಯಾವ ಅಂಕಿ ಅಂಶಗಳನ್ನು ಕೇಳಿದರೂ ತಟ್ಟನೆ ಹೇಳಿಬಿಡುವ ಶಕ್ತಿ ಸಿದ್ದಯ್ಯನವರದು. ತರೀಕೆರೆ ತಾಲ್ಲೂಕಿನಲ್ಲಿ ತರೀ ಜಮೀನು ಎಷ್ಟು ? ಮಧುಗಿರಿ ತಾಲ್ಲೂಕಿನಲ್ಲಿ ಮಹಿಳೆಯರು ಎಷ್ಟು ? ಚಿನ್ನದ ಗಣಿ ರಾಜಾದಾಯವೆಷ್ಟು ? ಮೈಸೂರಿನಿಂದ ಮಿರ್ಜಾರವರು ಪಡೆದ ಹಣವೆಷ್ಟು? ಹೀಗೆ ಬಾಯಿಗೆ ಬಂದ ಯಾವ ಪ್ರಶ್ನೆಗಳನ್ನು ಅವರಿಗೆ ಹಾಕಿ ನೋಡಿ ; ಅವಕ್ಕೆಲ್ಲಾ ನಿಮಗೆ ಸಿದ್ಧವಾದ ಉತ್ತರ. ಆ ಬಗ್ಗೆ ಅವರು ಅಷ್ಟೊಂದು ಅಭ್ಯಾಸಮಾಡಿದ್ದಾರೆ. ರಾಜ್ಯಾಡಳಿತದ ಆಯ ವ್ಯಯ, ಅಂಕಿ ಅಂಶಗಳು ಅವರಿಗೆ ರಕ್ತಗತವಾಗಿ ಬಿಟ್ಟಿವೆ. ಆ ವಿಚಾರದಲ್ಲಿ ಅವರ ತಿಳಿವಳಿಕೆ ಸಾಟಿ ಇಲ್ಲದ್ದು.

ಸಿದ್ಧಯ್ಯನವರು ವಿವೇಕಿಗಳು ; ವಿಚಾರಶೀಲರು ; ರಾಜನೀತಿ ಕೋವಿದರು. ಅವರ ರಾಜಕೀಯ ಜ್ಞಾನ ಅವರ ೧೫ ವರ್ಷಗಳ ಸಾರ್ವಜನಿಕ ಸೇವೆಯ ಫಲ. ೧೯೩೩ ರಲ್ಲಿ ಎಲ್.ಎಲ್. ಬಿ. ಪದವೀಧರರಾದರು. ಪ್ರೊ|| ರಾಲೋ ಮತ್ತು ಎನ್. ಎಸ್. ಸುಬ್ಬರಾಯರ ಪಟ್ಟಶಿಷ್ಯರಾಗಿ ಕಾಲೇಜಿನ ಕಾರ್ಯಕಲಾಪಗಳಲ್ಲಿ ಹೆಚ್ಚು ಆಸಕ್ತಿ ತೋರಿಸುತ್ತಾ ಬಂದುದರಿಂದ ಇಂದಿನ ಅಸಾಧಾರಣ ಪ್ರತಿಭಾಶಕ್ತಿ ಸಿದ್ದಯ್ಯನವರಲ್ಲಿ ಬಂದಿದೆ. ೧೯೩೫ ರಲ್ಲಿ ಶಿವಮೊಗ್ಗಾದಲ್ಲಿ ವಕೀಲಿ ವೃತ್ತಿಯನ್ನು ಆರಂಭಿಸಿದೊಡನೆಯೇ ಸಾರ್ವಜನಿಕ ಸೇವಾವೃತ್ತಿಯೂ ಅಂಟಿಕೊಂಡಿತು. ಶಿವಮೊಗ್ಗಾ ಜಿಲ್ಲೆಯ ಶಾಸನ ಸಭಾಸದಸ್ಯರಾಗಿದ್ದ ಹೆಚ್. ಜಿ. ಬಸಪ್ಪನವರಿಂದ ಪ್ರೋತ್ಸಾಹಿಸಲ್ಪಟ್ಟು, ಅವರು ತುಳಿದ ಹೆಜ್ಜೆಯನ್ನೇ ತಾವೂ ತುಳಿದು ಸಾರ್ವಜನಿಕ ಸೇವಾಕ್ಷೇತ್ರಕ್ಕೆ ಕಾಲಿಟ್ಟರು.

## ಎಲ್ಲರಿಗೂ ಬೇಕಾದವರೇ !

ಶಿವಮೊಗ್ಗಾ ನಗರದಲ್ಲಿ ಇವರಿಲ್ಲದ ಸಂಸ್ಥೆ ಇಲ್ಲ. ಇವರಿಂದ ಸಹಾಯ ಪಡೆಯದ ಜನರಿಲ್ಲ. ಒಂದಲ್ಲ ಒಂದು ವಿಧದಿಂದ ಸಿದ್ದಯ್ಯನವರು ಎಲ್ಲರಿಗೂ ಬೇಕು. ವೀರಶೈವ ವಿದ್ಯಾರ್ಥಿನಿಲಯ, ಆದಿ ಕರ್ಣಾಟಕ ವಿದ್ಯಾರ್ಥಿನಿಲಯ, ಹಿಂದಿ ಪ್ರಚಾರಸಭಾ, ಅನಾಥಾಲಯ ಮುಂತಾದುವುಗಳಲ್ಲಿ ಕೆಲಸಮಾಡಿದ್ದಾರೆ. ಜಿಲ್ಲೆಯ ಹಿಂದುಳಿದ ಪಂಗಡ ವಿದ್ಯಾರ್ಥಿವೇತನ ಸಮಿತಿಯ ಅಧ್ಯಕ್ಷರಾಗಿಯೂ ಮಲೆನಾಡು ವಿದ್ಯಾರ್ಥಿ ವೇತನದ ಸಮಿತಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ. ೬॥ ಕೋಟಿ ರೂಪಾಯಿಗಳ ಭದ್ರಾವತಿ ಅಣೆಕಟ್ಟು ಯೋಜನೆಯಲ್ಲೂ, ವಿಶ್ವ ವಿದ್ಯಾನಿಲಯ ಸೆನೇಟಿನಲ್ಲೂ, ರೈಲ್ವೆ ಬೋರ್ಡಿನಲ್ಲೂ ದುಡಿದಿದ್ದಾರೆ.

ಸಿದ್ದಯ್ಯನವರು ಮನಸೆಳೆಯುವ ಭವ್ಯಾಕಾರ ಮೂರ್ತಿಯಲ್ಲ. ಬಡತನಕ್ಕೆ ಸಿಕ್ಕಿ ಬೆಂದಂತಹ ಬಡಕಲು ದೇಹ. ಬೆಳ್ಳಗೆ ತೆಳ್ಳಗಿರುವ ಮೈಕಟ್ಟು. ಮುಖದಲ್ಲಿ ಗಂಭೀರ ಸ್ವಭಾವ. ತೀಕ್ಷ್ಣ ಕಣ್ಣುಗಳು. ಸಮಾಧಾನವಾಗಿದ್ದರೂ ಅಶಾಂತಿಯನ್ನು ತೋರಿಸುವ ವರ್ಚಸ್ಸು. ಉಡುಪು ಬಹು ಸರಳ. ಡೌಲು ಡಬ್ಬಾಳಿಕೆಗಳಿಲ್ಲ. ನೋಡಲು ಸೀಕಲು ಮನುಷ್ಯರಂತೆ ಕಂಡು ಬಂದರೂ ಆ ಸೀಕಲು ದೇಹದಲ್ಲಿ ಅಡಗಿರುವಶಕ್ತಿ, ಅಜೇಯವಾದುದು, ಅಸಾಧಾರಣವಾದುದು.

ಜಂಗಮ ಕುಲದಲ್ಲಿ ಜನಿಸಿದವರಾದುದರಿಂದ ಸಿದ್ದಯ್ಯನವರಿಗೆ ಶಿವಮೊಗ್ಗೆಯಲ್ಲಿ ಬಹಳ ಪೂಜ್ಯತೆ ಇದೆ. ಅವರ ಹೆಸರಿಗಿಂತ "ಐನೋರ" "ಗುರುಗಳು" ಎಂಬ ಹೆಸರು ಅವರಿಗೆ ಹೆಚ್ಚು ಬಳಿಕೆಗೆ ಬಂದಿದೆ. ಇವರು ಮನೆಯಿಂದ ಹೊರಟರೆಂದರೆ ವೀರಶೈವ ಪಂಗಡಕ್ಕೆ ಸೇರಿದವರೆಲ್ಲರೂ ತಮ್ಮ ಮನೆಯೊಳಕ್ಕೆ ಇವರನ್ನು ಸ್ವಾಗತಿಸಿ ಪಾದಹಿಡಿದು ನಮಸ್ಕರಿಸಿ ಕಳುಹಿಸುವುದು ಅಲ್ಲಿನವರ ಅಭ್ಯಾಸವಾಗಿ ಹೋಗಿದೆ. ಇವರಿಗೆ ಅಲ್ಲಿ ಅಷ್ಟೊಂದು ಭಕ್ತಿ, ಗೌರವ, ವಿಶ್ವಾಸ. ಪುನೆತನದ ಹಿರಿತನಕ್ಕಿಂತ ಇವರ ಸೌಜನ್ಯ, ಸದ್ಗುಣ, ಸ್ವಾರ್ಥರಹಿತ ಸೇವೆಗಳೇ ಅದಕ್ಕೆ ಕಾರಣ.

ಶಿವಮೊಗ್ಗೆಯ ಶೈವಜನ ಇವರಲ್ಲಿ ಭಕ್ತಿ ಇಟ್ಟಿರುವಂತೆ ಶಿವಮೊಗ್ಗಾ ಜಿಲ್ಲೆಯ ಎಲ್ಲ ಜನರು ಇವರಲ್ಲಿ ಗೌರವ, ವಿಶ್ವಾಸವನ್ನು ಇಟ್ಟಿದ್ದಾರೆ. ಅವ್ವ

ರಿಂದಲೇ ಜನ ಇವರನ್ನು ಆ ಜಿಲ್ಲೆಯ ಅಪ್ರತಿಮ ಏಕೈಕ ನಾಯಕರನ್ನಾಗಿ ಮಾಡಿದೆ. ಒಂದೇಸಮನಾಗಿ ಹತ್ತು ವರ್ಷಗಳ ಕಾಲ ನ್ಯಾಯವಿಧಾಯಕ ಸಭೆಯ ಸದಸ್ಯರನ್ನಾಗಿ ಆರಿಸಿದೆ. ೩ ವರ್ಷಗಳಕಾಲ ಜಿಲ್ಲಾ ಬೋರ್ಡು ಅಧ್ಯಕ್ಷರನ್ನಾಗಿ ಮಾಡಿದೆ. ಇವರ ಸಂಚಾರ ತಮ್ಮಕಡೆ ಬರುವುದೆಂದರೆ ಆಕಡೆ ಜನರಿಗೆ ಬಹಳ ಆನಂದ. ಅಷ್ಟೇ ಸಂತೋಷದಿಂದ ಜನ ಸ್ವಾಗತಿಸುತ್ತಾರೆ. ಸಿದ್ದಯ್ಯನವರು ಶಿವಮೊಗ್ಗ ಪೌರಸಭೆಯಲ್ಲೂ ೧೯೩೯ ರಿಂದ ೧೯೪೯ ರ ವರಿವಿಗೆ ಹತ್ತುವರ್ಷ ದುಡಿದಿದ್ದಾರೆ. ಸೇವೆಯಲ್ಲಿ ಹಿಂದುಳಿಯುವ ಜೀವವೇ ಅಲ್ಲ ಸಿದ್ದಯ್ಯನವರದು.

## ಮನೆ ಅನ್ನಛತ್ರವಿದ್ದಂತೆ

ಐನೋರು ಕೊಡುಗೈ ಮುಂದಾಗಿ ಜನಿಸಿದವರು. ಇವರ ಮನೆ ಒಂದು ಅನ್ನಛತ್ರವಿದ್ದಂತೆ. ಯಾವಾಗಲೂ ಊಟ ನಡೆಯುತ್ತಲೇ ಇರಬೇಕು. ಬೆಳಗ್ಗೆ ಹಾಕಿದ ಬೆಂಕಿ ಒಲೆಯಲ್ಲಿ ಆರುವಂತಿಲ್ಲ. ಸಂತರ್ಪಣೆ ನಡೆದಂತೆ ನಡೆದುಹೋಗುತ್ತದೆ. ಇವರ ಸ್ವಭಾವ ಅಷ್ಟೊಂದು ಸರಳ, ಅಷ್ಟೊಂದು ಉದಾರ. ಮನೆಗೆ ಬಂದವರಿಗೆಲ್ಲಾ ಇವರು ನಮ್ಮ ಆಪ್ತರು, ಬಂಧುಗಳು, ಒಡಹುಟ್ಟಿದವರು ಎನ್ನುವಂತಿರುತ್ತದೆ. ಹೃದಯಬಿಚ್ಚಿ ಮಾತನಾಡುವ ಇವರ ಸುಗುಣ, ಮಾತೆಯಂತೆ ಮಮತೆತೋರಿಸುವ ಇವರ ಧರ್ಮಪತ್ನಿ ವೀರಮ್ಮನವರ ಅಕ್ಕರೆಯೇ ಆ ಭಾವನೆಗೆ ಕಾರಣ.

ವಿದ್ಯಾರ್ಥಿಗಳಿಗೆ, ಬಡವರಿಗೆ, ಅನಾಥರಿಗೆ ಇವರ ಮನೆಯ ಬಾಗಿಲು ಯಾವಾಗಲೂ ತೆರೆದೇ ಇರುತ್ತದೆ. ಹುಡುಕಿಕೊಂಡು ಬಂದವರು ಬರಿಗೈಯಲ್ಲಿ ಹೋದುದೇ ಇಲ್ಲ. ದೇವರು ಕೊಟ್ಟದ್ದು ಕೊಂಡುಹೋಗಿ ಎನ್ನುತ್ತಾರೆ. ೧೯೨೭ ರಿಂದ ೧೯೪೮ ರಲ್ಲಿ ಜೈಲು ಸೇರುವವರೆಗೂ ಸಿದ್ದಯ್ಯನವರು ಸುಮಾರು ೧೦ ಜನರಿಗೆ ಕಡಿಮೆ ಇಲ್ಲದಷ್ಟು ವಿದ್ಯಾರ್ಥಿಗಳಿಗೆ ಮನೆಯಲ್ಲಿ ಒಂದೇ ಸಮನಾಗಿ ಊಟ ಕೊಟ್ಟಿದ್ದಾರೆ. ಇದು ಪ್ರತಿದಿನವೂ ಬರುತ್ತಿದ್ದ ಅಭ್ಯಾಗತ ಪ್ರವಾಹದ ಜೊತೆಗೆ ತಂಗಿರುತ್ತಿದ್ದ ನೀರು.

ಇವರು ಬಲ್ಲಿದ ಮನೆತನದಿಂದ ಬಂದವರಲ್ಲ. ಸಾಮಾನ್ಯ ದರ್ಜೆಗೆ ಸೇರಿದವರು. ಸಿದ್ದಯ್ಯನವರದು ವಜ್ರಮುಷ್ಟಿ. ಹಿಡಿದ ಹಟವನ್ನು ಸಾಧಿಸುವ

ವರೆವಿಗೂ ಬಿಡುವುದಿಲ್ಲ. ಅಂದವಾತ್ರಕ್ಕೆ ಹಟವಾದಿಗಳೆಂದಲ್ಲ. ಒಮ್ಮೆ ತೀರ್ಮಾನಕ್ಕೆ ಬಂದರೆ ತಕ್ಷಣ ಅದನ್ನು ಬದಲಾಯಿಸಿ ಬೇರೊಂದು ತೀರ್ಮಾನಕ್ಕೆ ಬರುವಚಂಚಲ ಹೃದಯವಲ್ಲ. ವಲ್ಲಭಬಾಯಿ ಪಟೇಲರಂತೆ ನಿರ್ಭಯ ಅವರ ಹುಟ್ಟುಗುಣ. ಇವರೊಂದು ಉಕ್ಕಿನ ಯಂತ್ರವಿದ್ದಂತೆ. ವಿಚಾರಗೊಂದಲವಿಲ್ಲದೆ ಹಿಂದುಮುಂದು ನೋಡದೆ ಕಾರ್ಯಸಾಗಬೇಕೆಂಬುದು ಇವರ ತೀರ್ಮಾನ. ದಳಪತಿಯಂತೆ, ಪಾಳೆಯಗಾರನಂತೆ 'ಮೀನಾಮೇಷ' ಎನ್ನದೆ ಮುಂದೆ ಸಾಗಬೇಕೆಂದು ಇವರ ಸಿದ್ಧಾಂತ.

ಸಾರ್ವಜನಿಕ ಸೇವೆಯಿಂದ ಇವರನ್ನು ತಪ್ಪಿಸಬೇಕೆಂದು ಸರ್ಕಾರವು ಅಗಳನ್ನು ಹಾಕಿನೋಡಿತು. ಆದರೆ ಅಂತಹುದಕ್ಕೆ ಜಗ್ಗುವ ಜೀವವಲ್ಲವೆಂಬುದನ್ನು, ಸರ್ಕಾರ ತೋರಿಸಿದ ಹುದ್ದೆಯನ್ನು ಕಾಲಿನಲ್ಲಿ ಒದ್ದು, ತೋರಿಸಿ ಕೊಟ್ಟರು. ಇದರ ಪರಿಣಾಮವಾಗಿ ಸರ್ಕಾರದ ಉನ್ನತಾಧಿಕಾರಿಗೆ ಸಿದ್ದಯ್ಯನವರ ಮೇಲೆ ಕೋಪಬಂತು. ಯಾವ ರೀತಿಯಲ್ಲಿಯಾದರೂ ಹಿಂಸೆ ಕೊಡಬೇಕೆಂದು ಆತ ಹೊಂಚು ಕಾಯುತ್ತಲಿದ್ದನು.

## ಕೋಮುವಾರು ವಾಸನೆ ಇದೆಯೆ?

ಕೋಮುವಾರು ಭಾವನೆಯು ಮೈಸೂರಿನಲ್ಲಿ ತಾಂಡವವಾಡುತ್ತಿದ್ದಂತಹ ಕಾಲವೊಂದಿತ್ತು. ಆಗಿನ ಕಾಲದ ಸಿದ್ದಯ್ಯನವರೆಲ್ಲಿ? ರಾಷ್ಟ್ರೀಯ ನವಯುಗದ ಈಗಿನಕಾಲದ ಸಿದ್ದಯ್ಯನವರೆಲ್ಲಿ? "ಕೋಮುವಾರು ಭಾವನೆ ಹೋಗಬೇಕು; ಕಾಂಗ್ರೆಸ್ ಏಕೈಕ ಸಂಸ್ಥೆಯಾಗಬೇಕು. ಅದರ ಆಶ್ರಯದಲ್ಲಿ ಎಲ್ಲರೂ ಜವಾಬ್ದಾರಿ ಸರ್ಕಾರಕ್ಕಾಗಿ ಕೆಲಸ ಮಾಡಬೇಕು—ಎಂದು ಘೋಷಿಸುವುದರಲ್ಲಿ ಸಿದ್ದಯ್ಯನವರೂ ಒಬ್ಬರು" ಎಂದು ಸಿದ್ದಯ್ಯನವರು ಕಾಂಗ್ರೆಸ್ ಅಧ್ಯಕ್ಷಗದ್ದುಗೆಗೆ ಏರಿದಾಗ 'ವಿಶ್ವಕರ್ಣಾಟಕ' ಹೇಳಿ ಹರಸಿತು. ಅಂತಹ ಅದ್ಭುತ ಮಾರ್ಪಾಟು ಅವರಲ್ಲಿ ಕಂಡುಬಂದುದೇ ಅದಕ್ಕೆ ಕಾರಣವಾಗಿತ್ತು.

ಹಿಂದೆ ಸಿದ್ದಯ್ಯನವರು ಪ್ರಜಾಸಂಯುಕ್ತಪಕ್ಷ, ಪ್ರಜಾಪಕ್ಷಗಳಲ್ಲಿದ್ದಾಗ್ಗೆ ಕೋಮುವಾರು ವೈಷಮ್ಯ ಅವರನ್ನು ಆರೀತಿ ಕುಣಿಸಿತ್ತು, ಆರೀತಿ ಆಡಿಸಿತ್ತು. ಅಂದಿನ ಅವರ ಭಾಷಣಗಳನ್ನು ನೋಡಿದರೆ ಈರೀತಿ ಮಾರ್ಪಾ

ಟಾಗುವರೆಂದು ಊಹಿಸಲಾಗುವುದಿಲ್ಲ. ಕಾಂಗ್ರೆಸ್‌ತತ್ವ, ಗಾಂಧಿಯಸತ್ವ ಇವರನ್ನು ಸಂಪೂರ್ಣ ಪರಿವರ್ತನೆಗೊಳಿಸಿವೆ.

ಇಷ್ಟಾದರೂ ಇವರ ಮೇಲಿರುವ ಕೋಪವಾರು ಕಪ್ಪುಚುಕ್ಕೆ ಕಳೆದಿಲ್ಲ. ಕಾಂಗ್ರೆಸ್ಸಿನಲ್ಲಿ ಅವರು ನಡೆಯಿಸಿರುವ ಸೇವೆ ಅದಕ್ಕಾಗಿ ಮಾಡಿರುವ ತ್ಯಾಗ ಇನ್ನೂ ಸಾಲದೆಂದೋ ಏನೋ ಕೆಲವು ಜನ ಆ ಕಪ್ಪುಗುರುತು ಇನ್ನೂ ಕಾಣು ತ್ತಿದೆಯೆಂದು ಹೇಳುತ್ತಿದ್ದಾರೆ. ಆ ಹಳೆಯ ವಾಸನೆ ಕೊಂಚ ಇವೆಯೆಂದು ಹಲವರ ಮತ.

## ಜೀವದಾನ ಮಾಡಿದ್ದಾರೆ

ವಕೀಲಿ ವೃತ್ತಿಯಲ್ಲಿ ಸಿದ್ದಯ್ಯನವರು ಕೈತುಂಬಾ ಸಂಪಾದನೆ ಮಾಡು ತ್ತಿದ್ದರು. ಹಿಡಿದ-ಮೊಖದ್ದಮೆಗಳಲ್ಲಿ ಸೋಲೆಂಬುದಿಲ್ಲ. ಅವರ ಕಾನೂನು ಜ್ಞಾನ ಉನ್ನತ ಮಟ್ಟದ್ದು. ಜೈಲಿನಲ್ಲಿ ಖೈದಿಯಾಗಿರುವಾಗ್ಗೆ ಅನೇಕ ಹೈ ಕೋರ್ಟ್ ಅಪೀಲುಗಳನ್ನು ಬರೆದುಕೊಟ್ಟು ಗಲ್ಲಿಗೇರಿಸಬೇಕಾಗಿದ್ದವರನ್ನು, ಆಮರಣಾಂತ ಶಿಕ್ಷೆಗೊಳಗಾಗಿದ್ದವರನ್ನು ಬಿಡುಗಡೆ ಮಾಡಿಸಿದ್ದಾರೆ. ನ್ಯಾಯಾ ಧೀಶರ ಕಣ್ಣಿಗೆ ಕಾಣದ, ಬುದ್ಧಿಗೆ ಹೊಳೆಯದ ಕಾನೂನು ಭಾಗಗಳು ಇವ ರಿಗೆ ತಟ್ಟನೆ ತಿಳಿದು ಹೋಗುತ್ತಿತ್ತು. 'ಅಂತಹ ಕುಶಾಗ್ರಬುದ್ಧಿ ಇವರದು. ವಾದದಲ್ಲೂ ಸಹ ಎತ್ತಿದ ಕೈ. ಕೆಳಗಿನ ಕೋರ್ಟಿನ ನ್ಯಾಯಾಧೀಶರುಗಳಿಗೆ ಅರ್ಥವಾಗದೆ ಇದ್ದ ಅಂಶಗಳನ್ನು ಹೈ ಕೋರ್ಟು ನ್ಯಾಯಾಧೀಶರ ಗಮನಕ್ಕೆ ತಂದು ಹಲವು ನಿರ್ಭಾಗ್ಯರಿಗೆ ಜೀವದಾನ ಮಾಡಿದ್ದಾರೆ. ಇಂತಹ ಅಸಾ ಧಾರಣ ಕಾನೂನು ಜ್ಞಾನವಿದ್ದ ಸಿದ್ದಯ್ಯನವರು ತಮ್ಮ ವೃತ್ತಿಯಲ್ಲಿ ಎಷ್ಟು ಸಂಪಾದನೆ ಮಾಡಬಹುದಾಗಿತ್ತು ಎಂಬುದನ್ನು ನಾವೇ ಸುಲಭವಾಗಿ ಊಹಿಸ ಬಹುದಾಗಿದೆ.

ಸಿದ್ದಯ್ಯನವರು ೧೯೪೫ನೆ ಏಪ್ರಿಲ್ ತಿಂಗಳು ವಿನೋಬಾನಗರದಲ್ಲಿ ನಡೆದ ಅಧಿವೇಶನದಲ್ಲಿ ಮೈಸೂರು ಕಾಂಗ್ರೆಸ್ ಅಧ್ಯಕ್ಷಪೀಠವನ್ನು ಅಲಂ ಕರಿಸಿ ಒಂದು ವರ್ಷಕಾಲ ಸಂಸ್ಥೆಯು ಸರ್ವತೋಮುಖವಾಗಿ ಬೆಳೆಯಲು ಬೇಕಾದಷ್ಟು ಕೆಲಸ ಮಾಡಿದರು. ಇವರ ಅಧ್ಯಕ್ಷ ಪದವಿಯ ಕಾಲದಲ್ಲಿ

ಸಂಸ್ಥಾನವನ್ನೆಲ್ಲಾ ಸಂಪೂರ್ಣವಾಗಿ ಸುತ್ತಿ ನೂರಾರು ಕಡೆಗಳಲ್ಲಿ ಭಾಷಣ ಮಾಡಿ ಜನತೆಯನ್ನು ಎಚ್ಚರಗೊಳಿಸಿದರು.

ಬೆಂಗಳೂರು ಮತ್ತು ಮೈಸೂರು ನಗರದ ಪೌರಸಭೆಗಳು ಸಿದ್ದಯ್ಯನವರಿಗೆ ಬಿನ್ನವತ್ತಳೆಗಳನ್ನು ಅರ್ಪಿಸಿದವು. ಈರೀತಿ ದೊಡ್ಡ ನಗರಗಳ ಪೌರಸಭೆಗಳು ಮೈಸೂರಿನ ಪ್ರಜೆಗೆ ಬಿನ್ನವತ್ತಳೆ ಅರ್ಪಿಸಿದ ಪ್ರಸಂಗ ಮೈಸೂರಿನ ಇತಿಹಾಸದಲ್ಲೇ ಇಲ್ಲ. ಇದೇ ಮೊದಲು, ಅಂತಹ ಅಸಾಧಾರಣ ಗೌರವ ಇವರ ಅಧ್ಯಕ್ಷತೆಯಲ್ಲಿ ಮೈಸೂರು ಕಾಂಗ್ರೆಸ್ಸಿಗೆ ಸಂದಿತು. ಇದೇ ರೀತಿ ಇನ್ನೂ ಅನೇಕ ಪೌರಸಭೆಗಳೂ, ವರ್ತಕ ಸಂಘಗಳು ಮೈಸೂರು ಕಾಂಗ್ರೆಸ್ ಅಧ್ಯಕ್ಷರಿಗೆ ಬಿನ್ನವತ್ತಳೆಗಳನ್ನು ಅರ್ಪಿಸಿ ಕಾಂಗ್ರೆಸ್ಸಿಗೆ ತಮ್ಮಲ್ಲಿರುವ ಭಕ್ತಿ, ವಿಶ್ವಾಸಗಳನ್ನು ತೋರ್ಪಡಿಸಿದುವು.

## ಬೆಣ್ಣೆಯಂತಹ ಮನಸ್ಸು

ಸಿದ್ದಯ್ಯನವರಿಗೆ ಪ್ರಥಮ ಕಾರಾಗೃಹ ಅನುಭವವಾದದ್ದು, ಶಿವಪುರದಲ್ಲಿ ನಡೆದ ಧ್ವಜ ಸತ್ಯಾಗ್ರಹದಲ್ಲಿ ನಾಲ್ಕು ತಿಂಗಳು ೨೦ ದಿವಸಗಳ ಶಿಕ್ಷೆಗೆ ಗುರಿಯಾಗಿದ್ದರು. ಸಂಧಾನವಾದ ಪ್ರಯುಕ್ತ ಒಂದು ತಿಂಗಳು ಆದ ನಂತರ ಬಿಡುಗಡೆಯಾಯಿತು. ೧೯೩೯ರಲ್ಲಿ ರಾಜದ್ರೋಹ ಭಾಷಣಕ್ಕೆಂದು ೨|| ವರ್ಷಗಳ ಕಠಿಣ ಶಿಕ್ಷೆಯನ್ನು ಅನುಭವಿಸಿದರು. ಹಾಕಿದ್ದ ಜುಲ್ಮಾನೆಗಾಗಿ ಸರ್ಕಾರ ಇವರ ಮೋಟಾರನ್ನು ಕಿತ್ತುಕೊಂಡಿತು. ಮತ್ತೆ ೧೯೪೧ನೆ ನವಂಬರ್ ತಿಂಗಳಲ್ಲಿ ಮೈಸೂರಿಗೆ ಬಾರದಂತೆ ತಡೆಗಟ್ಟಲು ಬೆಳಗೊಳದಲ್ಲೇ ಇವರನ್ನು ದಸ್ತಗಿರಿ ಮಾಡಿ ಅದೇ ಸಾಯಂಕಾಲ ಶಿವಮೊಗ್ಗಾಕ್ಕೆ ಕರೆದೊಯ್ದು ಬಿಡುಗಡೆ ಮಾಡಿದರು.

ವಕೀಲಿ ವೃತ್ತಿಯ ಸನ್ನದನ್ನು ಕಿತ್ತುಕೊಳ್ಳಲೋಸುಗ ಕಾನೂನು ಪ್ರಕಾರ ಇವರ ಮೇಲೆ ಮೊಕದ್ದಮೆಯೊಂದನ್ನು ಹೂಡಲಾಗಿತ್ತು. ಆಗ ಎದುರು ಪಾರ್ಟಿಯ ಖರ್ಚುಬಾಬ್ತು ೧೦೦ ರೂಪಾಯಿಗಳನ್ನು ಕೊಡಬೇಕೆಂದು ತೀರ್ಮಾನವಾಯಿತೇ ಹೊರತು ಸನ್ನದನ್ನು ಕಿತ್ತುಕೊಳ್ಳಲಿಲ್ಲ.

ಸಿದ್ದಯ್ಯನವರು ಜೈಲು ವಾಸದಲ್ಲಿ ಅನುಭವಿಸಿದ ಕಷ್ಟ ಹೇಳತೀರದು. ೨೫ ಸೇರು ರಾಗಿಯನ್ನು ಬೀಸಬೇಕೆಂದು ಆ ಬಡಕಲು ಪ್ರಾಣಿಯನ್ನು ಬಲ

ವಂತ ಮಾಡಿದರೆ ಹೇಗೆ? ಕಣ್ಣೀರು ಬಿಡುತ್ತಾ ಕಷ್ಟಪಟ್ಟು ೧೫, ೧೬ ಸೇರು ಬೀಸಿ, ಮುಂದುವರಿಸಲು ಶಕ್ತಿಸಾಲದೆ ಅದೇ ಬೀಸುವ ಕಲ್ಲಿನಮೇಲೆ ತಲೆಯಿಟ್ಟು 'ಅಯ್ಯೋ ದೇವರೇ' ಎಂದು ದುಃಖಿಸುತ್ತಿದ್ದರೆಂಬ ಕರುಣ ಕಥೆಯನ್ನು ಕೇಳಿದರೆ ಎಂತಹವರಿಗಾದರೂ ಕಣ್ಣೀರು ಬಾರದೆ ಇರದು. ಅಂತಹ ಕಷ್ಟವನ್ನು ಸಹಿಸಿದ ವ್ಯಕ್ತಿ ಅವರು.

೧೯೪೨ನೇ ಅಗಸ್ಟ್ ಬಿರುಗಾಳಿಗೆ ಮತ್ತೆ ಸಿಕ್ಕಿಬಿದ್ದರು. ಎಲ್ಲರಂತೆ ಸಿದ್ದಯ್ಯನವರನ್ನೂ ಸರ್ಕಾರವು ಸ್ಥಾನಬದ್ಧತೆಯಲ್ಲಿ ಇಟ್ಟಿತು. ೧ ವರ್ಷ ೪ ತಿಂಗಳು ಜೈಲಿನಲ್ಲೇ ಇದ್ದರು. ಅವರ ಸೂಕ್ಷ್ಮಪ್ರಕೃತಿ ಅವರನ್ನು ಆಗಾಗ್ಗೆ ಹಾಸಿಗೆ ಹಿಡಿಸುತ್ತಿತ್ತು. ೧೬ನೇ ತಿಂಗಳಲ್ಲಿ ಅದು ಉತ್ಕಟಾವಸ್ಥೆಗೆ ಬಂತು. ವಿಕ್ಟೋರಿಯಾ ಆಸ್ಪತ್ರೆಗೆ ಸಾಗಿಸಿದರು. ಕೆಲವು ದಿನಗಳ ಮೇಲೆ ಸರ್ಕಾರ ಎಚ್ಚೆತ್ತು ಅವರನ್ನು ಬಿಡುಗಡೆ ಮಾಡಿತು.

ಸಿದ್ದಯ್ಯನವರು ಸೊಗಸಾಗಿ ಭಾಷಣ ಮಾಡಬಲ್ಲರು. 'ಇವರ ಭಾಷಣದ ಓಟಕ್ಕೆ ತಡೆಯಿಲ್ಲ. ವ್ಯಂಗ್ಯ ಕಟೂಕ್ತಿಗಳಿಗೆ ಎತ್ತಿದ ಕೈ. ಮಾತನಾಡುವಾಗ ಯೋಚನೆ ಮಾಡಬೇಕಾದ ಅವಶ್ಯಕತೆಯಿಲ್ಲ. ಶಬ್ದ ಭಂಡಾರ ಬಾಯಲ್ಲೇ ಇದೆ. ದೊಡ್ಡ ವಿಶೇಷಣಗಳನ್ನೊಳಗೊಂಡ ಉದ್ದುದ್ದವಾದ ವಾಕ್ಯಗಳನ್ನು ಹೇಳುವುದು ಇವರ ಭಾಷಣದ ವೈಶಿಷ್ಟ್ಯ. ಜೊತೆಗೆ ಕಿರುಮಾತಿನ ಸಿಡಿಲೂ ಉಂಟು. ಮಾತುಗಳನ್ನು ಗಾಳಿಯಲ್ಲಿ ತೇಲಿಬಿಡುವುದಿಲ್ಲ. ಮಾತನಾಡುವುದನ್ನೆಲ್ಲಾ 'ಸ್ಪಷ್ಟವಾಗಿ ಕೂಗಿ ಹೇಳುತ್ತಾರೆ. ಹಾಸ್ಯವಾಗಿಯೂ ಮಾತಾಡಬಲ್ಲರು. ಆದರೆ ಭಾಷಣದಲ್ಲಿ ದುಃಖ ಪ್ರಸಂಗವನ್ನು ವರ್ಣಿಸಬೇಕಾದರೆ ಅವರಿಂದಾಗದ ಮಾತು. ಅತ್ತೇಬಿಡುತ್ತಾರೆ- ಅಂತಹ ಮೃದು ಹೃದಯ. ಬೆಣ್ಣೆಯಂತಹ ಮನಸ್ಸು.

ಒಮ್ಮೆ ಭಾಷಣಕ್ಕಾಗಿ ಇವರನ್ನು ತುಮಕೂರಿಗೆ ಆಹ್ವಾನಿಸಲಾಗಿತ್ತು. ಸಿದ್ದಯ್ಯನವರ ಜೊತೆಯಲ್ಲೇ ಜೈಲಿನಲ್ಲಿದ್ದು ಅವರು ಅನುಭವಿಸಿದ ಕಷ್ಟವನ್ನು ಕಣ್ಣಾರೆ ಕಂಡಿದ್ದ ಶ್ರೀ ಸುಬ್ರಹ್ಮಣ್ಯರವರು ಸಿದ್ದಯ್ಯನವರ ಪರಿಚಯ ಭಾಷಣ ಮಾಡಿಕೊಡುತ್ತಾ ಅವರು ಅನುಭವಿಸಿದ ದುಃಖವನ್ನು

ಸೂಕ್ಷ್ಮವಾಗಿ ವರ್ಣಿಸಿದರು. ನಂತರ ಭಾಷಣ ಮಾಡಲು ಎದ್ದುನಿಂತ ಸಿದ್ದಯ್ಯನವರಿಗೆ ಜೈಲಿನಲ್ಲಿ ತಾವು ಸಹಿಸಿದ ಕಷ್ಟದ ಚಿತ್ರ, ಮುಂದೆ ಬಂದಂತಾಗಿ ದುಃಖ ಒತ್ತರಿಸಿ ಬಂತು. ಕಣ್ಣಿನಲ್ಲಿ ನೀರು ಧಾರಾಕಾರವಾಗಿ ಹರಿಯಿತು. ಭಾಷಣ ಮಾಡಲು ಬಾಯಿ ಬರಲಿಲ್ಲ. ನಿಂತಿದ್ದವರು ಎಳೆಯ ಮಗುವಿನಂತೆ ಅಳುತ್ತಾ ಕುಳಿತುಬಿಟ್ಟರು. ವಜ್ರ ಮುಷ್ಟಿಯಾದರೂ ಅವರದು ಹೆಂಗರುಳಿನಂತಹ ಹೃದಯ. ಅದು ದುಃಖದ ನೆನಪನ್ನು ಸಹ ಸಹಿಸಲಾರದು.

ಪಾರ್ಲಿಮೆಂಟರಿ ಕಾರ್ಯಕ್ರಮಗಳಲ್ಲಿ ತಮಗೆ ಆಸಕ್ತಿ ಇರುವಂತೆ ತಮ್ಮ ಧರ್ಮ ಪತ್ನಿಗೂ ಇರಬೇಕೆಂಬ ಅಭಿಲಾಷೆಯಿಂದ ಅವರನ್ನು ಪ್ರಜಾಪ್ರತಿನಿಧಿ ಸಭೆಯ ಶಿವಮೊಗ್ಗಾ ಜಿಲ್ಲೆಯ ಮಹಿಳಾ ಸದಸ್ಯರನ್ನಾಗಿ ಮಾಡಿದ್ದರು. ಅವಶ್ಯ ಬಿದ್ದಾಗ ಅವರನ್ನೂ ಜೈಲಿಗೆ ದಬ್ಬಲು ಹಿಂಜರಿಯುವ ವ್ಯಕ್ತಿಯಲ್ಲ.

ಸಿದ್ದಯ್ಯನವರ ಸ್ವಾರ್ಥರಹಿತ ಸೇವೆಗೆ, ಅನುಭವಿಸಿದ ಕಷ್ಟಕ್ಕೆ, ಮಾಡಿರುವ ಬಲಿದಾನಕ್ಕೆ ಮತ್ತು ಅವರಲ್ಲಿರುವ ದಕ್ಷತೆಗೆ ಮುಂದಿನ ಮೈಸೂರು ರಾಜ್ಯಾಂಗದಲ್ಲಿ ಒಂದು ಸ್ಥಾನ ಮುಡುಪಾಗಿ ಇರಬಹುದಲ್ಲವೇ ? ಇದ್ದರೂ ಇರಬಹುದು.



## ಟಿ. ಸುಬ್ರಹ್ಮಣ್ಯ

ಬಹಿರಂಗ ಸಭೆಗಳಲ್ಲಿ ಮಾತನಾಡಲು ನಿಂತರೆ ಸಾಕು, ಇವರ ಮಾತಿನಲ್ಲಿ ಒಂದು ತಡೆ ಇಲ್ಲ; ಒಂದು ತೊಡಕಿಲ್ಲ. ಸರಳವಾಗಿ, ಸರಾಗವಾಗಿ ಮಾತನಾಡಬಲ್ಲರು. ಅಷ್ಟೇ ಅಲ್ಲ; ಅವರ ಮಾತಿನಲ್ಲಿ ಮೋಹನಾಸ್ತ್ರವಿದೆ. ವಶೀಕರಣಶಕ್ತಿ ಇದೆ. ಕುಳಿತು ಕೇಳುವವರನ್ನು ತಮ್ಮೆಡೆಗೆ ಬಹು ಸುಲಭವಾಗಿ ಸೆಳೆದುಕೊಳ್ಳಬಲ್ಲ ಸಾಮರ್ಥ್ಯವಿದೆ. ಭಾಷಣವನ್ನು ಕೇಳುತ್ತಾ ಕುಳಿತೆಡೆಯಲ್ಲಿಯೇ, ಮೈಮರೆತು ತನ್ಮಯರಾಗಿ ಕೊನೆಗೆ ಇವರ ಬಲೆಗೆ ಬಿದ್ದಿರುವವರು ಎಷ್ಟೋ ಮಂದಿ. ಇದು ತುಮಕೂರು ಟಿ. ಸುಬ್ರಹ್ಮಣ್ಯರವರ ಅಸಮಾನ ಶಕ್ತಿ, ಅಪೂರ್ವ ಸಾಮರ್ಥ್ಯ. ಇವರ ಭಾಷಣವನ್ನು ಕೇಳಿದವರೆಲ್ಲರಿಗೂ ಈ ಅನುಭವವಿಲ್ಲದೆ ಇಲ್ಲ.

### ಕಾಂಗ್ರೆಸ್ಸಿನ ಭೀಷ್ಮಾಚಾರ್ಯ

ಅಖಿಲಭಾರತ ಕಾಂಗ್ರೆಸ್ಸಿನ ಸತ್ಯಾಗ್ರಹದಲ್ಲಿ ಭಾಗವಹಿಸಿ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧಿಕಾರಿ ವರ್ಗದಲ್ಲಿದ್ದು, ಈಗಲೂ ಮೈಸೂರು ಕಾಂಗ್ರೆಸ್ಸಿನ ಮುಂದಾಳುಗಳ ಶ್ರೇಣಿಯಲ್ಲಿ ಕೆಲಸಮಾಡುತ್ತಿರುವರೆಂದರೆ ಸುಬ್ರಹ್ಮಣ್ಯರವರೊಬ್ಬರೇ. ಬಹುದಿನದಿಂದಲೂ ಗಾಂಧೀಜಿಯ ಭಕ್ತರಾಗಿದ್ದು, ಇಂದು ಮೈಸೂರು ಕಾಂಗ್ರೆಸ್ಸಿನ ಭೀಷ್ಮಾಚಾರ್ಯರಂತಿದ್ದಾರೆ. ಕಾರ್ಯಕಾರಿ ಸಮಿತಿಯ ಪ್ರಮುಖ ಸದಸ್ಯತನದ ಪಟ್ಟ ಮೈಸೂರು ಕಾಂಗ್ರೆಸ್ಸು ಹುಟ್ಟಿದಂದಿನಿಂದಲೂ ಇವರಿಗಿದೆ. ಮುಂದೆಯೂ ಸಹ ಇರುತ್ತದೆಂಬುದರಲ್ಲಿ ಸಂದೇಹವಿಲ್ಲ. ಅಂತಹ ದಕ್ಷರಿರುವರು.

ಸುಬ್ರಹ್ಮಣ್ಯರವರು ಈಗ್ಗೆ ೫೦ ವರ್ಷಗಳ ಮುಂಚೆ ತುಮಕೂರು ಜಿಲ್ಲೆಯ ತುರುವೇಕೆರೆ ತಾಲ್ಲೂಕು ತಾಳಕೆರೆ ಎಂಬ ಗ್ರಾಮದಲ್ಲಿ ಹುಟ್ಟಿದರು. ತಾಳಕೆರೆಗೆ ' ಶಾಂತ ತಟಾಕ ' ಎಂಬ ಇನ್ನೊಂದು ಹೆಸರುಂಟು. ಇವರು ಆ ಶಾಂತ ತಟಾಕದ ಹೆಸರನ್ನುಳಿಸಲೋಸುಗ ಆ ಊರಿನಲ್ಲಿ ಹುಟ್ಟಿದಂತೆ ಕಾಣುತ್ತದೆ. ಶಾಂತಮೂರ್ತಿಯ ಸ್ವರೂಪವೊಂದನ್ನು ಕಾಣಬೇಕೆಂದರೆ

ಅದು ಸುಬ್ರಹ್ಮಣ್ಯರವರಲ್ಲಿ. ಇವರು ಅಪರೂಪಕ್ಕೆ ಒಮ್ಮೆ ಕೋಪಿಸಿಕೊಂಡರೂ, ಹದ್ದುಮೀರಿ ರೊಚ್ಚಿಗೆದ್ದುದನ್ನು ನಾನು ಕಂಡರಿಯೆ. ಇವರಲ್ಲಿ ತಾಳ್ಮೆ, ಸಹನೆಗಳು ಮೂರ್ತಿಮತ್ತಾಗಿ ಕುಳಿತುಬಿಟ್ಟಿವೆ. ನಿರ್ಮಲ, ನಿಶ್ಚಲ ಮನೋಭಾವನೆಯಲ್ಲಿ ಮೈಸೂರಿನ ಮುಂದಾಳುಗಳ ಪೈಕಿ ಇವರಿಗೊಂದು ಹಿರಿಯ ಸ್ಥಾನ.

ಅಧಿಕಾರಿ ಲಾಲಸೆಯಾಗಲಿ, ಧನಧಾನ್ಯಗಳಮೇಲಿನ ಇಚ್ಛೆಯಾಗಲಿ ಇವರಿಗಿಲ್ಲ. ಆಸೆ ಲೋಭಗಳು ಇವರಿಂದ ಮೂರು ಬಾರು ದೂರವೇ ಹೊರತು ಹತ್ತಿರವೇ ಸೇರುವಂತಿಲ್ಲ. ಅಧಿಕಾರ, ಸಂಪತ್ತುಗಳಕಡೆಗೆ ಕೊಂಚ ಗಮನಕೊಟ್ಟಿದ್ದರೆ, ಸುಬ್ರಹ್ಮಣ್ಯರವರು ಇದುವರೆವಿಗೆ ಸರ್ಕಾರಿ ದೊಡ್ಡ ಹುದ್ದೆಯಲ್ಲೋ ಅಥವಾ ಸಿರಿವಂತಿಕೆಯ ಸೊಗಸಿನಲ್ಲೋ ಇರಬಹುದಾಗಿತ್ತು. ಆದರೆ ಇವರಿಗೆ ಬಾಲ್ಯದಿಂದಲೂ ದೇಶಾಭಿಮಾನ, ಮತ್ತು ಪ್ರಜಾ ಸೇವಾಕಾಂಕ್ಷೆಯ ಕಡೆ ಮನಸ್ಸುಬಿತ್ತು. ಅಂದಿನಿಂದಲೂ, ಇವರಿಗೆ ಅದೇ ಗಂಟುಬಿತ್ತು.

## ಹಿಂದೆ ಪಕ್ಕಾ ಜೂಜುಕೋರ

ಸುಬ್ರಹ್ಮಣ್ಯರವರು ಎಂಟು ವರ್ಷ ವಯಸ್ಸಿನವರೆಗೂ, ಕೂಲಿಮಠದಲ್ಲಿ ಓದುತ್ತಿದ್ದು, ತರುವಾಯ ಮೈಸೂರು ಮತ್ತು ತುಮಕೂರಿನಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಬೆಂಗಳೂರಿನಲ್ಲಿ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ತರುವಾಯ ಬೊಂಬಾಯಿಗೆ ಹೋಗಿ **ಲಾ** ಕಾಲೇಜಿಗೆ ಸೇರಿದರು. ಆಗಲೇ ಇವರಿಗೆ ರಾಷ್ಟ್ರಸೇವಾ ಕಾರ್ಯದಲ್ಲಿ ಅಭಿರುಚಿ ಆರಂಭವಾದುದು.

ಈ ವೇಳೆಗೆ ಸರಿಯಾಗಿ ಮಹಾತ್ಮರು ಅಸಹಕಾರ ಚಳುವಳಿಯನ್ನು ಪ್ರಾರಂಭಿಸಿದ್ದರು. ಸುಬ್ರಹ್ಮಣ್ಯರವರು **ಲಾ** ಕಾಲೇಜುಬಿಟ್ಟು ಅಸಹಕಾರ ಚಳುವಳಿಯಲ್ಲಿ ಭಾಗವಹಿಸಲು ಹೋದರು. ಆದರೆ ಇವರು ಹೋದ ಕೆಲವು ದಿನಗಳಲ್ಲೇ ಚಳುವಳಿ ನಿಲ್ಲಿಸಲ್ಪಟ್ಟಿತಾದುದರಿಂದ ಹಿಂತಿರುಗಿ ಬಂದು **ಲಾ** ಕಾಲೇಜಿಗೆ ಸೇರಿ ೧೯೨೧ ರಲ್ಲಿ ಎಲ್‌ಎಲ್. ಬಿ. ಪರೀಕ್ಷೆಗೆ ಕುಳಿತು ತೇರ್ಗಡೆ

ಯಾದರು. ಬಾಲ್ಯದಲ್ಲಿ ಇವರು ಬಹಳ ತುಂಟನೆನಿಸಿಕೊಂಡಿದ್ದರೆಂದರೆ ಈಗ ಯಾರೂ ನಂಬುವಂತಿಲ್ಲ. ಅಷ್ಟೇಕೆ ಇವರು ವಕೀಲಿ ವೃತ್ತಿಯನ್ನು ಕೈಗೊಂಡು ಕೆಲವು ವರ್ಷಗಳು ಪಕ್ಕಾ ಜೂಜುಕೋರರಾಗಿದ್ದರು. ತುಮಕೂರಿಂದ ಮದರಾಸಿನ ಕುದುರೆ ಜೂಜಿಗೆ ಹೋಗಿ ಸಾವಿರಾರು ರೂಪಾಯಿಗಳನ್ನು ಕಳೆದುಬರುತ್ತಿದ್ದರು. ಕೆಲವುದಿನ ಇಸ್ಪೀಟು, ಕುದುರೆ ಜೂಜು ಇವುಗಳು ಇವರ ದಿನಚರಿ ಕಾರ್ಯಗಳಾಗಿದ್ದವು. ಆಗ ಅವಾಕ್ಕಾಗಿ ಎಲ್ಲವನ್ನು ತ್ಯಾಗಮಾಡಲು ಸಹ ಸಿದ್ಧರಾಗಿದ್ದರು.

## ಭಿಕಾರಿಯಾಗಲೂ ಸಿದ್ಧ

ಅದೇ ವ್ಯಕ್ತಿ ಇಂದು ತನ್ನ ಜೀವನವನ್ನು ಸಂಪೂರ್ಣವಾಗಿ ಬದಲಾಯಿಸಿಕೊಂಡು ದೇಶಸೇವಾಕಾರ್ಯಕ್ಕಾಗಿ ಜಗತ್ತಿನ ಸಕಲ ಸುಖಸಂಪತ್ತುಗಳನ್ನೂ, ಬಂಧುಬಳಗವನ್ನೂ ತ್ಯಾಗಮಾಡಲು ಮುಂದೆ ಬಂದಿರುವುದು ಗಮನಾರ್ಹವಾದ ವಿಚಾರ. ತಮ್ಮ ಜೀವನವನ್ನು ಶಾಂತಿಸಹನೆಗಳ ತಳಹದಿಯಮೇಲೆ ಕಟ್ಟಿ ಅದರಮೇಲೆ ತ್ಯಾಗದ ಭವ್ಯ ಭವನ ನಿರ್ಮಿಸಿ, ತಮ್ಮ ಬಾಳನ್ನು ಬೆಳಗಿಸಿದ್ದಾರೆ. ಈ ರಾಜಕೀಯ ಗೊಂದಲ ಮತ್ತು ಶಾಂತಿಸಮರದ ಬಿರುಗಾಳಿಗಳಲ್ಲಿ ತಮ್ಮ ಬದುಕಿನ ಬಾಳನ್ನು ಮುಳುಗಿಸಿಕೊಂಡು ತಮ್ಮ ಹೆಂಡತಿ ಮಕ್ಕಳನ್ನು ಆರ್ಥಿಕ ಸಂಕಟಕ್ಕೆ ಸಿಕ್ಕಿಸಿದ್ದಾರೆ. ರಾಷ್ಟ್ರಸೇವಾಕಾರ್ಯಕ್ಕಾಗಿ ಮನೆಮಠಗಳನ್ನು ಆಸ್ತಿಪಾಸ್ತಿಗಳನ್ನು ಲೆಕ್ಕಿಸದೆ, ಬೀದಿಯ ಭಿಕಾರಿಯಂತಾಗುವುದನ್ನು ಸಹ ಹಿಂದುಮುಂದುನೋಡದೆ ದುಡಿಯುತ್ತಿದ್ದಾರೆ.

ಸುಬ್ರಹ್ಮಣ್ಯರವರು ಈಗ್ಗೆ ಇಪ್ಪತ್ತು ವರ್ಷಗಳ ಮುಂಚೆ ವಕೀಲಿ ವೃತ್ತಿಯನ್ನು ಆರಂಭಿಸಿದರು. ಆದರೆ ಇವರು ಗಳಿಸಿರುವುದೇನು? ಬರಿಗೈಗಳು ಮಾತ್ರ! ಆಸ್ತಿಪಾಸ್ತಿಗಳನ್ನು ಮಾರಬೇಕಾದಂತಹ ಪ್ರಸಂಗ ಬಂದಿದ್ದರೂ ಜನತೆಯಲ್ಲಿ ರಾಜಕೀಯ ಜಾಗೃತಿಯನ್ನುಂಟುಮಾಡಬೇಕೆಂಬ ಹುಚ್ಚು ಇವರನ್ನು ಬಿಟ್ಟಿಲ್ಲ. ವಕೀಲಿ ವೃತ್ತಿಯಲ್ಲಿ ನಿಸ್ಸೀಮ ಕೀರ್ತಿಯನ್ನು ಗಳಿಸುವ ಯೋಗ್ಯತೆ ಇದೆ. ಅರ್ಹತೆ ಇದೆ. ಆದರೇನು? ನಿಸ್ವಾರ್ಥ ನಿರ್ಮಲ ಸೇವೆಯಕಡೆ ಅವರ ಮನಸ್ಸೆಳೆಯಲ್ಪಟ್ಟಿತೇ ಹೊರತು, ಸ್ವಾರ್ಥ ಸಾಧಕರಂತೆ ಸ್ವರ್ಣ ಶೇಖರಣದ ಕಡೆಗಲ್ಲ.

**ರಾಜದ್ರೋಹಿ**

ಇವರನ್ನು ಟಿ. ಸುಬ್ರಹ್ಮಣ್ಯ ಎಂದು ಕರೆಯುವುದಕ್ಕೆ ಬದಲಾಗಿ ರಾಜ
ದ್ರೋಹದ ಸುಬ್ರಹ್ಮಣ್ಯ ಎಂದು ಕರೆಯುವುದು ಸೂಕ್ತ. ಏಕೆಂದರೆ, ಇವರ
ಮೇಲೆ ಅಷ್ಟೊಂದು ರಾಜದ್ರೋಹದ ಮೊಕದ್ದಮೆಗಳು. ಇವರಮೇಲೆ ಹಾಕಿ
ರುವಷ್ಟು ರಾಜದ್ರೋಹ ಮೊಕದ್ದಮೆಗಳನ್ನು ಮೈಸೂರು ಸಂಸ್ಥಾನದಲ್ಲಿ
ಇನ್ನಾರಮೇಲೂ ಹಾಕಿಲ್ಲ. ಯಾವಾಗಲೂ ಇವರು ರಾಜದ್ರೋಹಕರವಾದ
ಭಾಷಣ ಮಾಡುವರು ಎಂದಲ್ಲ. ಇವರು ಬಾಯಿಬಿಟ್ಟರೆ ಸಾಕು ಮುಂದೆ
ಕುಳಿತು ಕೇಳುವವರನ್ನು ಬಹಳ ಜಾಗ್ರತೆ ಮೋಹಗೊಳಿಸಬಲ್ಲರು. ನುಡಿ
ಯಲ್ಲಿ ನುಡಿದೇವಿ ಕುಣಿಯುತ್ತಾಳೆ. ಅದೊಂದು ಯಕ್ಷಿಣಿವಿದ್ಯೆ' ಇವರ
ನಾಲಿಗೆಗೆ ಸಿದ್ಧಿಸಿರುವಂತೆ ಕಾಣುತ್ತದೆ. ಆದ್ದರಿಂದಲೇ ಮಾತನಾ
ಡಲು ಸರ್ಕಾರ ಇವರಿಗೆ ಹೆಚ್ಚು ಅವಕಾಶ ಕೊಡುವುದಿಲ್ಲ. ಇವರ ಬಾಯಿಗೆ
ಬೀಗಹಾಕಲು ಸರ್ಕಾರವು ಸದಾ ಸಿದ್ಧವಾಗಿ ನಿಂತಿರುತ್ತದೆ.

ಸುಬ್ರಹ್ಮಣ್ಯರವರಮೇಲೆ ಪ್ರಥಮ ರಾಜದ್ರೋಹ ಮೊಕದ್ದಮೆ ೧೯೩೭
ರಲ್ಲಿ ಹಾಕಲ್ಪಟ್ಟಿತು. ಮೊಕದ್ದಮೆಯು ನಡೆಯುತ್ತಿದ್ದಾಗ ಅಖಿಲ ಭಾರತ
ಕಾಂಗ್ರೆಸ್ಸಿನವರು ಸಂಸ್ಥಾನಗಳಲ್ಲಿ ಯಾರೂ ರಾಜಕೀಯ ಗೊಂದಲಗಳನ್ನು
ಎಬ್ಬಿಸಬಾರದು ಎಂಬ ರೀತಿಯಲ್ಲಿ ಠರಾವೊಂದನ್ನು ಮಾಡಿದುದರ ಪರಿ
ಣಾಮವಾಗಿ ಇವರಮೇಲೆ ಇದ್ದ ಮೊಕದ್ದಮೆಯನ್ನು ಸರ್ಕಾರವು ವಾಪಸ್
ತೆಗೆದುಕೊಂಡಿತು. ಮತ್ತೆ ೧೯೩೮ ರಲ್ಲಿ ರಾಜದ್ರೋಹ ಮೊಕದ್ದಮೆ
ಯೊಂದನ್ನು ಇವರಮೇಲೆ ಹೂಡಲಾಯಿತು. ಆದರೆ ಆಗಲೂ ಸರ್ಕಾರ
ದವರು ಇವರಮೇಲಿನ ಮೊಕದ್ದಮೆಯನ್ನು ವಾಪಸ್ ತೆಗೆದುಕೊಳ್ಳಬೇಕಾಗಿ
ಬಂತು. ಮೈಸೂರು ಕಾಂಗ್ರೆಸ್ಸಿಗೂ ಮೈಸೂರು ಸರ್ಕಾರಕ್ಕೂ ಆದ
ಒಪ್ಪಂದವೇ ಇವರಮೇಲಿನ ಮೊಕದ್ದಮೆಯನ್ನು ಆಗ ವಾಪಸ್ ತೆಗೆದುಕೊ
ಳ್ಳಲು ಕಾರಣವಾದದ್ದು.

ತಿರುಗಿ ೧೯೩೯ ರಲ್ಲಿ ಇವರಮೇಲೆ ಮತ್ತೊಂದು ರಾಜದ್ರೋಹ ಮೊಕ
ದ್ದಮೆಯನ್ನು ಹೂಡಲಾಯಿತು. ಅದರಲ್ಲಿ ಇವರಿಗೆ ಒಂದು ವರ್ಷ ಶಿಕ್ಷೆ
ವಿಧಿಸಲ್ಪಟ್ಟಿತು. ಮುನ್ನೂರು ರೂಪಾಯಿಗಳ ದಂಡವನ್ನು ಕೊಡಬೇಕೆಂದು
ಆಜ್ಞೆಮಾಡಲಾಯಿತು. ಈ ಶಿಕ್ಷೆಯನ್ನು ಅನುಭವಿಸಿ ಹೊರಗೆ ಬರುವುದ

ರೊಳಗಾಗಿ ಪೋಲೀಸರು ಇವರ ಮನೆಯನ್ನು ಮುತ್ತಿ ಸುಮಾರು ೪೦೦ ರೂಪಾಯಿಗಳ ಬೆಲೆ ಬಾಳುವ ಪುಸ್ತಕಗಳನ್ನು ದಂಡದ ಮೊಬಲಗಿಗಾಗಿ ಹೊತ್ತುಕೊಂಡು ಹೋದರು.

ಈ ಕಠಿಣ ಶಿಕ್ಷೆಯನ್ನು ಅನುಭವಿಸುವ ಸಮಯದಲ್ಲಿ ಇವರು ಬಹು ಕಷ್ಟಪಟ್ಟರು. ಪ್ರತಿನಿತ್ಯವೂ ೨೫ ಸೇರು ರಾಗಿ ಬೀಸುವುದೇ ಮೊದಲಾದ ಕಠಿಣತೆರನಾದ ಕೆಲಸಗಳನ್ನು ತುರಂಗದಲ್ಲಿ ಮಾಡಬೇಕಾಗಿಬಂತು. ಸಂತೋಷ ದಿಂದ ಮಾಡಿಯೂ ಮಾಡಿದರು. ಇದರ ಪರಿಣಾಮವಾಗಿ ಸುಮಾರು ೯ ತಿಂಗಳಕಾಲ ಆಮಶಂಕೆ ಮುಂತಾದರೋಗಕ್ಕೆ ತುತ್ತಾಗಿ ದೇಹಪ್ರಕೃತಿಯೇ ಕೆಟ್ಟುಹೋಯ್ತು. ಆದರೂ ನಿಶ್ಚಲಮನೋವೃತ್ತಿಯ ಸುಬ್ರಹ್ಮಣ್ಯರವರಿಗೆ ಆದರಿಂದ ಯಾವ ಕೆಡುಕೂ ಉಂಟಾಗಲಿಲ್ಲ.

## ತುಮಕೂರಿನಲ್ಲಿನ ಚಳುವಳಿ

ಇವರ ದೇಶಾಭಿಮಾನದ ಕಾವು ಮೈಸೂರು ಸರ್ಕಾರಕ್ಕೆ ತಟ್ಟಿದುದು ೧೯೩೧ ರಲ್ಲಿ ಇವರು ತುಮಕೂರಲ್ಲಿ ನಡೆಸಿದ ಪಾನನಿರೋಧ ಚಳುವಳಿಯಲ್ಲಿ. ತುಮಕೂರು ನಗರದಲ್ಲಿ ಪಾನನಿರೋಧ ಚಳುವಳಿಯನ್ನು ಆರಂಭಿಸಲು ನಾಯಕರಾಗಿ ನಿಂತು ಒಂದೇ ಸಮನಾಗಿ ಹನ್ನೊಂದು ತಿಂಗಳು ಹೆಂಡದಂಗ ಡಿಯಮುಂದೆ ಸತ್ಯಾಗ್ರಹನಡೆಸಿದರು. ಸುಮಾರು ನೂರು ಜನರು ಒಬ್ಬರಾದ ಮೇಲೊಬ್ಬರಂತೆ ದಸ್ತಗಿರಿಯಾಗಿ ಜೈಲುಸೇರಿದರು. ಇವರಿಗೂ ಸಹ ಮೂರು ತಿಂಗಳಶಿಕ್ಷೆ ವಿಧಿಸಲ್ಪಟ್ಟಿತು. ಈ ಪ್ರಚಂಡ ಚಳುವಳಿಯನ್ನು ನೋಡಿ ಇಡೀ ದೇಶವೇ ಬೆರಗಾಗಿ ಹೋಯಿತು. ಅಂತಹ ಚಳುವಳಿಯನ್ನು ಆಗ ನಮ್ಮ ದೇಶ ನೋಡಿರಲಿಲ್ಲ.

ಈ ಚಳುವಳಿಗೆ ಮುನ್ನ ಮತ್ತು ತರುವಾಯ ಮೂರು ನಾಲ್ಕುಬಾರಿ ಕಾನೂನು ಭಂಗದ ಆಪಾದನೆಯಮೇಲೆ ಸುಬ್ರಹ್ಮಣ್ಯರವರ ದಸ್ತಗಿರಿಯಾಗಿದೆ. ೧೯೩೭ ರಲ್ಲಿ ಕರ್ನಾಟಕ ಪ್ರಾಂತೀಯ ರಾಜಕೀಯ ಪರಿಷತ್ತಿನ ಅಧ್ಯಕ್ಷತೆ ವಹಿಸಲು ಇಲ್ಲಿಂದ ಬಾಗಲಕೋಟೆಗೆ ಹೊರಟರು. ಇಂಡಿಯಾ ಸರ್ಕಾರವು ಆ ಸಭೆಯನ್ನು ಅಕ್ರಮ ಕೂಟವೆಂದು ಸಾರಿ ಸುಬ್ರಹ್ಮಣ್ಯರವರನ್ನು ದಸ್ತಗಿರಿ

ಮಾಡಿ ಆರುವರೆ ತಿಂಗಳು ಶಿಕ್ಷೆ ವಿಧಿಸಿತು. ಬಿಜಾಪುರ ಜೈಲಿನಲ್ಲಿ ಆ ಶಿಕ್ಷೆಯನ್ನು ಪೂರ್ಣವಾಗಿ ಪೂರೈಸಿಕೊಂಡು ತುಮಕೂರಿಗೆ ಹಿಂತಿರುಗಿದರು.

ಈರೀತಿ ನಾಲ್ಕಾರುಬಾರಿ ಶಿಕ್ಷೆಯನ್ನು ಅನುಭವಿಸಿದರೂ ರಾಜಕೀಯ ರಂಗವನ್ನು ಬಿಡಲಿಲ್ಲ. ಅದಕ್ಕಾಗಿಯೇ ತಮ್ಮ ಜೀವನವನ್ನು ಸವೆಯಿಸಲು ದೃಢಸಂಕಲ್ಪಮಾಡಿ ಮುಂದೆ ನುಗ್ಗಿದ್ದಾರೆ. ಇವರು ಅನುಭವಿಸಿರುವಕಷ್ಟ, ಮಾಡಿರುವ ತ್ಯಾಗಗಳು ಅಷ್ಟು ಪ್ರಾಮುಖ್ಯವಲ್ಲ. ಇವರ ಪ್ರಶಾಂತಸ್ವಭಾವ ಸರ್ವ ಸಮತಾದೃಷ್ಟಿ. ಅವುಗಳು ಇವರ ಬಾಳಿಗೆ ಬಣ್ಣಕೊಟ್ಟು ಸುಪ್ರಸಿದ್ಧ ರಾಜಕಾರಣ ಪಟುವನ್ನಾಗಿ ಮಾಡಿವೆ.

### ಸಾಹಿತ್ಯದ ರುಚಿಯೂ ಉಂಟು

ಸುಬ್ರಹ್ಮಣ್ಯರವರು ಕೇವಲ ರಾಜಕೀಯರಂಗದ ರಾಜಕಾರಣ ಪಟುವು ಮಾತ್ರವಲ್ಲ. ಸಾಹಿತ್ಯರಂಗದ ಸಾಹಿತ್ಯಾಭಿಮಾನಿಯೂ ಆಗಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಬಹಳ ಅಭಿರುಚಿ. ಕನ್ನಡ ಪುಸ್ತಕಗಳು ಯಾವುದೇ ಸಿಗಲಿ ಮೊದಲಿನಿಂದ ಕೊನೆಯುವರಿವಿಗೂ ಓದದೆ ಬಿಡುವುದಿಲ್ಲ. ಇವರಿಗೆ ಜ್ಞಾಪಕ ಶಕ್ತಿ ಬಹಳ. ಓದಿದ್ದನ್ನಾಗಲಿ, ಕೇಳಿದ್ದನ್ನಾಗಲಿ ಸುಲಭವಾಗಿ ಮರೆಯುವಂತಿಲ್ಲ. ಎಷ್ಟೋದಿನಗಳು ಕಳೆದಮೇಲೆ ಕೇಳಿದರೂ ಓದಿದ್ದನ್ನು ಕಂಠಪಾಠ ಮಾಡಿದಂತೆ ಹೇಳಿಬಿಡಬಲ್ಲರು.

ಹರಿಹರದ ಕಾಂಗ್ರೆಸ್ ಅಧಿವೇಶನ ಮುಗಿಸಿಕೊಂಡು ವಾಪಸ್‌ಬರುತ್ತಾ ರೈಲುಗಾಡಿಯಲ್ಲಿ ಶ್ರೀ ರಾಜರತ್ನಂರವರ 'ಗಂಡುಗೊಡಲಿ'ಯ ಪ್ರಸ್ತಾಪ ಬಂತು. ಸರಿ ಎಲ್ಲರೂಸೇರಿ ಅದನ್ನು ಹೇಳಬೇಕೆಂದು ಸುಬ್ರಹ್ಮಣ್ಯರವರನ್ನು ಪ್ರಾರ್ಥಿಸಿದರು. ಮೊದಲಾಯಿತು ಪರುಶರಾಮನ ಪಾತ್ರಾಭಿನಯಕ್ಕೆ. ಎದೆಯುಬ್ಬಿ ಮೊದಲಿನಿಂದ ಕೊನೆಯವರಿವಿಗೂ ಗಂಡು ಗೊಡಲಿಯ ನಾಟಕವನ್ನೇ ಆಡಿಬಿಟ್ಟರು. ಅವರ ಆವೇಶಪೂರ್ವಕ ಅಭಿನಯವನ್ನು ಕಂಡು ನಾವೆಲ್ಲರೂ ಬೆಚ್ಚಿ ಬೆರಗಾದೆವು. ಅವರು ಆ ಪುಸ್ತಕವನ್ನು ಓದಿದ್ದುದು ೮–೧೦ ವರ್ಷಗಳಹಿಂದೆ ಎಂದು ಕೊನೆಯಲ್ಲಿ ನಮಗೆ ತಿಳಿಯಿತು. ಅವನ್ನು ಓದಿದಂದು ತಮ್ಮನ್ನು ತಾವೇ ಮರೆತು ತನ್ಮಯರಾದರಂತೆ.

## ಊಟದಮನೆಯಲ್ಲೂ ಹರಿಜನರು

ವೈದಿಕ ಬ್ರಾಹ್ಮಣ ಮನೆತನದಲ್ಲಿ ಜನಿಸಿದ ಸುಬ್ರಹ್ಮಣ್ಯರವರಿಗೆ ಹರಿಜನೋದ್ಧಾರ ಕಾರ್ಯದಲ್ಲಿ ಬಹಳ ಶ್ರದ್ಧೆ. ಅದಕ್ಕಾಗಿ ಅವರು ಏನು ಬೇಕಾದರೂ ಮಾಡಲು ಸಿದ್ಧ. ತಮ್ಮನ್ನು ಜಾತಿಯಿಂದ ಹೊರಹೊರಡಿಸಿದರೂ ಅಸ್ಪೃಶ್ಯತಾ ನಿವಾರಣಾ ಕಾರ್ಯಕ್ರಮವನ್ನು ಕೈಬಿಡುವುದಿಲ್ಲವೆಂಬ ಸತ್ಯಸಂಕಲ್ಪ ಮಾಡಿದ್ದಾರೆ. ಈ ಕೆಲವು ವರ್ಷಗಳ ಕೆಳಗೆ ಶ್ರೀ ಬ್ರಹ್ಮಚಾರಿ ರಾಮಚಂದ್ರ ಮತ್ತು ಇನ್ನೊಬ್ಬ ಮಹಾಶಯರು ಇವರ ಮನೆಗೆ ಬಂದರು. ಮಧ್ಯಾಹ್ನದವರೆವಿಗೂ ಮಾತನಾಡಿ ತರುವಾಯ ಊಟಕ್ಕೆ ಕುಳಿತರು. ಸುಬ್ರಹ್ಮಣ್ಯ, ರಾಮಚಂದ್ರ ಮತ್ತು ಇನ್ನೊಬ್ಬರಿಗೂ ಮೂರು ಎಲೆಗಳನ್ನು ಊಟದ ಮನೆಯಲ್ಲಿ ಹಾಕಲಾಯಿತು. ಇನ್ನೇನು ಊಟಕ್ಕೆ ಕುಳಿತುಕೊಳ್ಳಬೇಕು, ಆಗ ರಾಮಚಂದ್ರಜಿ ಹೇಳಿದರು ಅವರ ಜೊತೆಯಲ್ಲಿರುವವರು ಹರಿಜನರೆಂದು.

ಸುಬ್ರಹ್ಮಣ್ಯರವರು ಈ ವಿಷಯ ಕೇಳಿ ಹಿಂದುಮುಂದು ನೋಡದೆ ಅವರ ಧರ್ಮಪತ್ನಿಗೆ ನಿಜಾಂಶ ಹೇಳಿಬಿಟ್ಟರು. "ಮೂರು ಎಲೆಗಳನ್ನು ಊಟದ ಮನೆಯಲ್ಲಿ ಹಾಕಿದ್ದಾಗಿದೆ, ಅಲ್ಲಿಯೇ ನಾವು ಮೂರು ಜನರು ಕುಳಿತು ಊಟಮಾಡುತ್ತೇವೆ. ಊಟಕ್ಕೆ ಹಾಕಿಬಿಡು," ಎಂದರು. ಅಂತೆಯೇ ಅವರುಗಳ ವಿಶಾಲ ಹೃದಯದ ಸವಿಯೂಟ ನಡೆಸಲ್ಪಟ್ಟಿತು. ಈಗಲೂ ಸಹ ಇವರ ಮನೆಯಲ್ಲಿ ಹರಿಜನರಿಗೆ ಪೂರ್ಣ ಪ್ರವೇಶ ಉಂಟು. ಅಸ್ಪೃಶ್ಯತಾಭಾವನೆಯು ಇವರ ಮನೆಯ ಸುತ್ತ ಹರಿದಾರಿಯೊಳಗೆ ಬರುವಂತಿಲ್ಲ.

ಇವರ ಮನೆ ಪರಸ್ಥಳದವರಿಗೆ ತೆರೆದ ಬಾಗಿಲು. ಅತಿಥಿಗಳು ಯಾರೇ ಬರಲಿ ಸಂಪೂರ್ಣ ಸ್ವಾಗತ. ತಮಗೇ ಇಲ್ಲ, ಆದರೂ ಬಂದವರಿಗೂ ಇಲ್ಲವೆನ್ನುವ ಮಾತೇ ಇಲ್ಲ. ಅಂತಹ ಉದಾರತೆ. ತುಮಕೂರು ಜಿಲ್ಲೆಯಲ್ಲಿ ಸ್ರಬ್ರಹ್ಮಣ್ಯರವರಿಗೆ ಬಹಳ ಗೌರವ, ಅವರ ಮಾತಿಗೆ ಹೆಚ್ಚು ಮನ್ನಣೆ. ಇವರನ್ನು ಯಾರೂ ಎದುರಿಸುವುದಿಲ್ಲ. ಎದುರಿಸುವಂತೆ ಮಾಡಿಕೊಳ್ಳುವ ವ್ಯಕ್ತಿಯೂ ಅಲ್ಲ. ಎಲ್ಲರ ಪ್ರೀತಿ ವಿಶ್ವಾಸಗಳನ್ನು ಗಳಿಸಿಕೊಂಡು ಮುಂದುವರಿಯುತ್ತಿರುವ ಮೂರ್ತಿ.

**ಸರಳ ಜೀವಿ**

ಸುಬ್ರಹ್ಮಣ್ಯರವರನ್ನು ನೋಡಿದವರಾರೂ ಅವರನ್ನು ಮರೆಯುವಂತಿಲ್ಲ. ಅಂಥ ಬಲವಾದ ಮೈಕಟ್ಟು, ವಿಶಾಲವಾದ ಎದೆ, ಪ್ರಧಾನವಾದ ಹಣೆ, ತುಂಬಿದ ಕೆನ್ನೆ, ಕಾಬೂಲಿವಾಲಗಳಿಗಿರುವಂತಹ ಎತ್ತರವಾದ ದೇಹ. ಮೈಸೂರ್ ಕಾಂಗ್ರೆಸ್ ಮುಂದಾಳುಗಳ ಪೈಕಿ ಯಾರೂ ಇಂತಹ ಬಲಭೀಮ ದೇಹವನ್ನಿಟ್ಟುಕೊಂಡಿರುವವರಿಲ್ಲ. ಆದ್ದರಿಂದಲೇ ಇವರು ಕಾಂಗ್ರೆಸ್ ವೇದಿಕೆಯ ಮೇಲೆ ಕುಳಿತಿರಲಿ ಅಥವಾ ನಡೆದುಹೋಗುತ್ತಿರಲಿ ಸ್ಪಷ್ಟವಾಗಿ ಕಾಣುತ್ತಾರೆ. ಇಷ್ಟೊಂದು ಎತ್ತರವಾದ ಆಳು ಇದುವರೆವಿಗೂ ಎಂತಹ ಕಿರಿಬಾಗಿಲಾದರೂ ತಲೆ ತಗ್ಗಿಸಿ ಹೋಗಿಲ್ಲ. ತಮ್ಮ ಎತ್ತರಕ್ಕೆ ತಮ್ಮ ಹೃದಯದ ವೈಶಾಲ್ಯಕ್ಕೆ ತಕ್ಕವಾಗಿ ಆ ಕಿರಿ ಬಾಗಿಲನ್ನು ಹಿರಿದು ಮಾಡಿಕೊಂಡು ಹೋಗುವ ಸ್ವಭಾವ ಇವರದು.

ಸುಬ್ರಹ್ಮಣ್ಯರವರದು ಸರಳ ಜೀವನ. ಆ ಸರಳತೆ, ಅವರ ನಿಜವಾದ ಗುಣ, ಹಗಲು ದೀವಟಿಗೆ ಹಿಡಿದು ನಿಧಾನವಾಗಿ ಹುಡುಕಿದರೂ ಅವರ ಹೃದಯದಲ್ಲಿ ಎಳ್ಳಷ್ಟೂ ಕಪಟ ಸಿಗಲಾರದು. ಅವರ ನಡೆ–ನುಡಿ ಮತ್ತು ಉಡಿಗೆ–ತೊಡಿಗೆಗಳಲ್ಲಿ ಆ ಸರಳತೆಯು ಸ್ಪಷ್ಟವಾಗಿ ಎದ್ದು ಕಾಣುತ್ತದೆ. ಅವರೊಡನೆ ಮಾತನಾಡುತ್ತಾ ಕುಳಿತರೆ ನೋಡಬೇಕು; ಆ ಸಲಿಗೆ, ಆ ವಿಶ್ವಾಸ ಪೂರ್ವಕ ಮಾತನ್ನು ಅನುಭವಿಸಿಯೇ ತಿಳಿಯಬೇಕು. ತಂದೆಯಂತೆ ಕರುಣಗೊಂಡು ಮಾತನಾಡುತ್ತಾರೆ. ಒಣಜಂಭ, ಅಹಂಕಾರಗಳನ್ನು ಕಂಡರೆ ಆಗದು. ಅಷ್ಟೇ ಶೀಲದ ಬಗ್ಗೆಯೂ ಎಚ್ಚರ. ಅಶ್ಲೀಲವಂತರನ್ನು ಕಂಡರೆ ಸ್ವಲ್ಪವೂ ಸಹಿಸುವುದಿಲ್ಲ.

ಒಮ್ಮೆ ನಾನು ಶ್ರೀ . . . . . . ರವರು ಎಂತಹ ಮುಂದಾಳುಗಳು? ಎಂತ ತ್ಯಾಗಶೀಲರು ಎಂದು ಆರಂಭಿಸಿದೆ. " ಸಾಕು ಸುಮ್ಮನಿರಿ ಅಂತಹ ಅಶ್ಲೀಲವಂತರನ್ನು ಮೊದಲು ಕಾಂಗ್ರೆಸ್ಸಿನ ಹೊರಗಟ್ಟಬೇಕು. ಅಂತಹವರಿಂದಲೇ ನಮ್ಮ ಸಂಸ್ಥೆಯ ಪ್ರಗತಿಪಥಕ್ಕೆ ತೊಂದರೆಯಾಗುತ್ತಿರುವುದು. ಅವರು ಎಷ್ಟೇ ತ್ಯಾಗಿಗಳಾದರೂ ಚಿಂತೆಯಿಲ್ಲ. ಅವರಿಗೆ ಇಲ್ಲಿ ಸ್ಥಾನವಿರಕೂಡದು " ಎಂದರು.

**ಅವಕಾಶವಾಗಲಿಲ್ಲ**

ಈ ರೀತಿ ವ್ಯಕ್ತಿಗಳ ಪ್ರತಿಷ್ಠೆಗಿಂತ, ಗೌರವಶೀಲಗಳಿಗಿಂತ, ಸಂಸ್ಥೆಯ ಪ್ರತಿಷ್ಟೆ ಪವಿತ್ರತೆಗಳ ಬಗ್ಗೆ ಗಮನವಿಟ್ಟಿರುವ ಸುಬ್ರಹ್ಮಣ್ಯರವರಿಗೆ ಅಧ್ಯಕ್ಷ ಪಟ್ಟ ಬಂದುದರಿಂದ ಮೈಸೂರ್ ಕಾಂಗ್ರೆಸ್ಸಿನ ಕೀರ್ತಿ ಪತಾಕೆಯನ್ನು ಮತ್ತಷ್ಟು ಎತ್ತರವಾಗಿ ಹಾರಾಡಿಸುವರು ಎಂದುಕೊಂಡೆವು. ಆದರೆ ಅದಕ್ಕೆ ಅವಕಾಶವಾಗಲಿಲ್ಲ. ಬೊಂಬಾಯಿನಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಸಮ್ಮೇಳನಕ್ಕೆ ಹೋಗಿ ವಾಪಸ್ ಬೆಂಗಳೂರಿಗೆ ಹಿಂತಿರುಗುತ್ತಿದ್ದಂತೆಯೇ ಸರ್ಕಾರವು ಕಾರ್ಯಕಾರಿ ಸಮಿತಿಯನ್ನು ನ್ಯಾಯಬಾಹಿರವೆಂದು ಸಾರಿ, ಇವರನ್ನು ಯಶವಂತಪುರದಲ್ಲೇ ದಸ್ತಗಿರಿ ಮಾಡಿದರು. ಇದರ ಪರಿಣಾಮವಾಗಿ ೧೬ ತಿಂಗಳುಗಳ ಕಾಲ ಸ್ಥಾನಬದ್ಧತೆಯಲ್ಲಿ ಇರಬೇಕಾಗಿ ಬಂತು.

ಸುಬ್ರಹ್ಮಣ್ಯರವರಿಗೆ ಹುಮ್ಮಸ್ಸು ಹೆಚ್ಚು. ಸ್ಫೂರ್ತಿ ಬಂದಾಗ ಮಹತ್ಕಾರ್ಯಗಳನ್ನು ಸಹ ಸುಲಭವಾಗಿ ಮಾಡಿ ಮುಗಿಸುತ್ತಾರೆ. ತತ್ವದ ಮೇಲೆ ಹೆಚ್ಚು ದೃಷ್ಟಿ. ತತ್ವದ ತಲೆಗೂದಲು ಕೊಂಚ ಕೊಂಕಾಗುವುದೆಂದರೂ ಸಹಿಸುವುದಿಲ್ಲ. ಅವಕಾಶ ಕೊಡುವುದಿಲ್ಲ. ಸ್ಥಾನಬದ್ಧತೆಯಲ್ಲಿರುವಾಗ ತತ್ವದ ಬಗ್ಗೆ ಅವರು ತೊಟ್ಟ ಹಟ ಎಲ್ಲ ಕಾಂಗ್ರೆಸ್ ಭಕ್ತರಿಗೂ ಗೊತ್ತಿದೆ. ಯಾರು ಏನು ಹೇಳಿನರೂ ಕೇಳದೆ ಭೀಷ್ಮ ಪ್ರತಿಜ್ಞೆ ಮಾಡಿ ಜಯಶೀಲನಾಗಿ ಬಂದ ಮಹಾನುಭಾವ.

ಅಧ್ಯಕ್ಷನಾಗಿ ಮಾಡಬೇಕೆಂದಿದ್ದ ಕಾರ್ಯಗಳನ್ನೆಲ್ಲಾ ಮಾಡಲಿಲ್ಲವಲ್ಲಾ ಎಂದು ಅವರ ಹೃದಯ ಆಗಾಗ್ಗೆ ಕೊರಗುವುದುಂಟು. ಆದರೇನು? ಅವರು ಅವನ್ನು ಮುಂದೆಯಾದರೂ ಮಾಡದೇ ಬಿಡುವ ವ್ಯಕ್ತಿಯಲ್ಲ.



## ಎಸ್. ನಿಜಲಿಂಗಪ್ಪ

ಮೈಸೂರು ಕಾಂಗ್ರೆಸ್ಸಿನ ನಾಲ್ಕನೇ ಅಧಿವೇಶನದ ವಿನೋಬ ನಗರವನ್ನು ರಚಿಸಿದ ವೇಳೆ ನಿಜಲಿಂಗಪ್ಪನವರ ಸೂಕ್ಷ್ಮ ಪರಿಚಯವನ್ನು "ಪ್ರಜಾಮತ" ಪತ್ರಿಕೆಯು ಕೊಟ್ಟಿತ್ತು. ಆ ಲೇಖನದ ಲೇಖಕರು ನಿಜಲಿಂಗಪ್ಪನವರನ್ನು ವಿನೋಬ ಭಾವೆಗೆ ಹೋಲಿಸಿ ಇವರನ್ನು 'ನಮ್ಮ ವಿನೋಬ ಭಾವೆ'ಯೆಂದು ಕರೆದಿದ್ದರು. ಈ ಹೋಲಿಕೆಯು ಸಂಪೂರ್ಣವಾಗಿ ಸರಿಹೋಗದಿದ್ದರೂ ನಿಜಲಿಂಗಪ್ಪನವರ ವಿಶಾಲಹೃದಯ, ವಿಶ್ವಪ್ರೇಮ, ನಿಸ್ವಾರ್ಥಸೇವಾಬುದ್ಧಿ, ಅವರನ್ನು ಆ ಮಟ್ಟಕ್ಕೆ ಕರೆದೊಯ್ದಿವೆ. ವಿನೋಬ ಭಾವೆಗೂ ನಿಜಲಿಂಗಪ್ಪನವರಿಗೂ ಎಷ್ಟೋ ಭಿನ್ನತೆ ಇದ್ದರೂ ಈ ಸದ್ಗುಣಗಳ ಪ್ರವಾಹದಲ್ಲಿ ಆ ಭಿನ್ನತೆ ಕೊಚ್ಚಿಹೋಗುವುದೆಂದು ಆ ಲೇಖಕರ ಅಭಿಪ್ರಾಯ.

### ಬಾಲ್ಯ ಮತ್ತು ವಿದ್ಯಾಭ್ಯಾಸ

ನಿಜಲಿಂಗಪ್ಪನವರ ಜನನ ದಾವಣಗೆರೆಯಲ್ಲಿ, ೧೯೦೨ರಲ್ಲಿ. ಹುಟ್ಟಿದ ಕೆಲವು ವರ್ಷಗಳಲ್ಲಿಯೇ ತಂದೆಯನ್ನು ಕಳೆದುಕೊಂಡರು. ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸ ದಾವಣಗೆರೆಯಲ್ಲೇ ನಡೆಯಿತು. ಬಾಲ್ಯದಲ್ಲಿ ಗಲಾಟೆಕೋರರ ಮತ್ತು ತುಂಟರ ಗುಂಪಿಗೆ ಸೇರಿದವರಾಗಿರಲಿಲ್ಲವೆಂಬುದಕ್ಕೆ ಇಂದು ಅವರಲ್ಲಿ ಕಂಡುಬರುವ ಸಾತ್ವಿಕ ಗುಣಗಳೇ ಸಾಕ್ಷಿಯಾಗಿವೆ.

ಮಾಧ್ಯಮಿಕ ವಿದ್ಯಾಭ್ಯಾಸ ಮುಗಿದ ಮೇಲೆ, ಅವರಿಗೆ ಮುಂದೇನು ಮಾಡಬೇಕೆಂಬ ಸಮಸ್ಯೆ ಬಂತು. ದಾವಣಗೆಗೆಯಲ್ಲಿ ಪ್ರೌಢಶಾಲೆ ಇರಲಿಲ್ಲ. ತಂದೆ ಇಲ್ಲದ ಈ ಮಗುವನ್ನು ಮೇಲಕ್ಕೆ ತಳ್ಳುವವರು ಬೇಕಿತ್ತು. ಇವರ ಚಿಕ್ಕಪ್ಪನವರು ಆ ಭಾರ ವಹಿಸಿಕೊಂಡರು. ಜೊತೆಗೆ ತಾಯಿಯ ಪ್ರೋತ್ಸಾಹವಿತ್ತು. ಓದಬೇಕೆಂಬ ಕುತೂಹಲ ಹುಡುಗನಿಗಿತ್ತು. ಚಿತ್ರದುರ್ಗಕ್ಕೆ ಬಂದು ಪ್ರೌಢಶಾಲೆಯ ವಿದ್ಯಾಭ್ಯಾಸಕ್ಕೆ ಆರಂಭಿಸಿದರು.

ಇದಕ್ಕೆ ನೆರವಾದ ಚಿತ್ರದುರ್ಗದ ವೀರಭದ್ರಪ್ಪನವರನ್ನು ನಿಜಲಿಂಗಪ್ಪನವರು ಈಗಲೂ ನೆನಸಿಕೊಳ್ಳುತ್ತಿರುತ್ತಾರೆ. ಇವರ ವಿದ್ಯಾಭ್ಯಾಸದಲ್ಲಿ ಅವರು ತೋರಿಸಿದ ಆಸಕ್ತಿ, ಪ್ರೇಮ, ಅಗಾಧವಾದುವು. ಅವರ ವಿಶ್ವಾಸಕ್ಕೆ ಪಾತ್ರರಾಗಿ ಚಿತ್ರದುರ್ಗದಲ್ಲಿ ಪ್ರೌಢವಿದ್ಯಾಭ್ಯಾಸವನ್ನು ಸಂಪೂರ್ಣವಾಗಿ ಮುಗಿಸಿಕೊಂಡು ಬೆಂಗಳೂರಿಗೆ ಹೊರಟರು. ಅಲ್ಲಿ ಇಂಟರ್‌ಮೀಡಿಯೆಟ್ ಪರೀಕ್ಷೆಯಾಯಿತು. ಆ ವೇಳೆಗೆ ನಿಜಲಿಂಗಪ್ಪನವರಿಗೆ ಬೇಕಾದಷ್ಟು ಬುದ್ಧಿ ಬೆಳವಣಿಗೆಯಾಗಿತ್ತು. ಓದನ್ನು ಮುಂದುವರಿಸಿ ೧೯೨೪ ರಲ್ಲಿ ಬಿ.ಎ. ಪರೀಕ್ಷೆಗೆ ಕುಳಿತು ಪದವೀಧರರಾದರು.

ಮಧ್ಯಮ ದರ್ಜೆಯ ಮನೆತನದಿಂದ ಬಂದವರಾದುದರಿಂದ ಪದವೀಧರರಾದಮೇಲೆ ವಿದ್ಯಾಭ್ಯಾಸ ಮುಂದುವರಿಸಲು ಇವರಿಗೆ ಹೆಚ್ಚು ಆತಂಕಗಳಿರಲಿಲ್ಲ. ಜೊತೆಗೆ ಬಂಧುಗಳನೇಕರ ಪ್ರೋತ್ಸಾಹವಿತ್ತು. ಆದ್ದರಿಂದ ಎಲ್‌ಎಲ್.ಬಿ. ಓದಲಿಕ್ಕೆ ಪೂನಾಕ್ಕೆ ಪ್ರಯಾಣ ಬೆಳೆಸಿದರು.

೧೯೨೬ ರಲ್ಲಿ ಎಲ್‌ಎಲ್.ಬಿ. ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ಚಿತ್ರದುರ್ಗದಲ್ಲಿ ವಕೀಲ ವೃತ್ತಿಯನ್ನು ಆರಂಭಿಸಿದರು. ತಂದೆಯನ್ನು ಕಳೆದುಕೊಂಡಿದ್ದ ನಿಜಲಿಂಗಪ್ಪನವರಿಗೆ ವಿದ್ಯಾರ್ಜನೆಗೆ ಪೂರ್ಣ ಅವಕಾಶವಿರಲಿಲ್ಲ. ಆದರೆ ವಿದ್ಯಾವಂತನಾಗಬೇಕೆಂಬ ದೃಢಮನಸ್ಸು ಇತ್ತು. ಅವರ ದೃಢಮನಸ್ಸು ಫಲಿಸಿತು.

## ಅಚ್ಚಳಿಯದ ಆ ಚಿತ್ರ

ನಿಜಲಿಂಗಪ್ಪನವರನ್ನು ನಾನು ನೋಡಿದುದು ಈಗ ಕೆಲವು ವರ್ಷಗಳ ಮುಂಚೆ. ಅಚ್ಚಳಿಯದ ಆ ಚಿತ್ರ ಈಗಲೂ ನನ್ನ ಕಣ್ಣಮುಂದೆ ಕಟ್ಟಿದಂತಿದೆ. ನಿಜಲಿಂಗಪ್ಪನವರದು ಸುಮಾರು ೫|| ಅಡಿ ಎತ್ತರದ ದುಂಡಾದ ದೇಹ, ದೇಹಕ್ಕೆ ಒಪ್ಪುವ ಗುಂಡುಮುಖ. ಬೌದ್ಧ ಸನ್ಯಾಸಿಗಳಲ್ಲಿ ಕಂಡುಬರುವಂತಹ ಅಪೂರ್ವ ವರ್ಚಸ್ಸು. ಆ ಬಿಳಿಮುಖದಲ್ಲಿ ಆ ವಿಶಾಲವಾದ ಹಣೆ ಕಣ್ಣುಗಳು. ಆ ಕಣ್ಣಿನಲ್ಲಿ ಯಾವಾಗಲೂ ಪ್ರೀತಿಸೌಹಾರ್ದಗಳು ತುಂಬಿ ತುಳುಕಿರುತ್ತವೆ. ಕಲೋಪಾಸಕರಂತೆ ಕಂಡುಬಂದರೂ ರಾಜ

ಕೀಯುದಲ್ಲಿ ಹೆಚ್ಚು ಆಸಕ್ತಿಯನ್ನು ಬೆಳೆಯಿಸಿಕೊಂಡಿದ್ದಾರೆ. ನಿಜಲಿಂಗಪ್ಪನವರ ವಾಣಿಯಲ್ಲಿ ಒಂದು ವೈಶಾಲ್ಯವಿದೆ. ವಿಶ್ವಪ್ರೇಮವಿದೆ. ಕಂಡವರನ್ನು ತನ್ನಡೆಗೆ ಸೆಳೆದುಕೊಳ್ಳುವ ತೇಜಸ್ಸು, ಸೌಹಾರ್ದ ಸ್ವಭಾವ ಚೆನ್ನಾಗಿದೆ.

ಅವರು ಮುಖವನ್ನು ಗಂಟಿಕ್ಕಿಕೊಂಡಿದ್ದಾಗಲೀ, ಸಿಟ್ಟುಮಾಡಿಕೊಂಡಿದ್ದಾಗಲೀ ನಾನು ಕಾಣೆ. ಎಂಟು ಭಾವಗಳಲ್ಲೂ ಅವರ ಮುಖದಲ್ಲಿ ಹುಸಿನಗೆ ಹರಿಯುತ್ತಿರುತ್ತದೆ. ಅವರ ಬಾಯಿಂದ ಎಂದೂ ಒರಟು ಮಾತು ಬಂದಿಲ್ಲ; ಇತರರನ್ನು ನೋಯಿಸುವಂತಹ ಮಾತನ್ನಾಡುವುದೇ ಇಲ್ಲ. ಸದಾ ಕಾರ್ಯಾಸಕ್ತರಾಗಿರುತ್ತಾರೆ. ನಿರಾಲಸ್ಯ ಪ್ರಕೃತಿ ಅವರದು. ಸೌಮ್ಯಸ್ವಭಾವವಾದರೂ ವಿನೋದಕ್ಕೇನೂ, ಕಡಿಮೆ ಇಲ್ಲ. ಮಾತನಾಡುತ್ತಾ ಮಾತಿನ ಮಧ್ಯೆ ನಗೆಯ ಬಾಣಗಳನ್ನು ಬಿಡುತ್ತಿರುತ್ತಾರೆ. ಅವರ ಸಖ್ಯವೊಂದು ಸಂತೋಷದ ಅನುಭವ, ಮರೆಯಲಾರದ ನೆನಪು.

ಅವರ ಸರಳತೆ ಶಾಂತತೆಗಳು ಅವರ ಜೀವನಕ್ಕೆ ಮೆರುಗು ಕೊಟ್ಟಿವೆ. ಅದರಲ್ಲಿ ಸಂಶಯವಿಲ್ಲ. ಅವರ ಮನೋವೃತ್ತಿ ಅಂತಹುದು. ಅವರ ಸ್ವಭಾವ ಎಳೆಯ ಮಗುವಿನ ಹಾಗೆ, ಸ್ವಚ್ಛ, ಸರಳ. ಅದರಲ್ಲಿ ಯಾವ ಕಲ್ಮಷವೂ ಇರುವುದಿಲ್ಲ. ಸೇರುವುದೂ ಇಲ್ಲ. ಶತ್ರುಗಳು ಕೃತ್ರಿಮತೆ ತೋರಿಸಿದರೂ, ಅವರಿಗೆ ಕೇಡೆಣಿಸಬಾರದೆಂಬ ಪ್ರಕೃತಿ. ಅಹಂಕಾರ, ಹೆಮ್ಮೆ ಅವರಿಂದ ಹರಿದಾರಿ ದೂರ.

ನಿಜಲಿಂಗಪ್ಪನವರ ದುಡಿತ ಇತರರಿಗೊಂದು ಆದರ್ಶ. ನಸುಕಿನಿಂದ ಮುಸುಕಿನ ವರೆವಿಗೂ ಏಕಪ್ರಕಾರವಾಗಿ ದುಡಿಯಬಲ್ಲರು. ಊಟ ಕೊಟ್ಟರೆ ಬೇಕು. ಇಲ್ಲದಿದ್ದರೆ ಬೇಕೆಂಬ ಕಾತುರವೇ ಇಲ್ಲ. ಪ್ರವಾಸದಲ್ಲಿ ಆಯಾಸದ ಮಾತೇ ಇಲ್ಲ.

## ಸದ್ದಿಲ್ಲದ ಪ್ರಗತಿ

ನಿಜಲಿಂಗಪ್ಪನವರು ವಕೀಲ್ ವೃತ್ತಿಯನ್ನು ಆರಂಭಿಸಿದಂದಿನಿಂದ ಚೆನ್ನಾಗಿ ಸಂಪಾದನೆಯಾಗಲಾರಂಭವಾಯ್ತು. ಇವರ ಗುಣ, ನಡೆನುಡಿ

ಜನರನ್ನು ಸೂಜಿಗಲ್ಲಿನಂತೆ ಆಕರ್ಷಿಸಿದುವು. ವೃತ್ತಿಯಲ್ಲೂ ಸಹ ಅದೇ ರೀತಿ ಕೀರ್ತಿಗಳಿಸಿದರು. ಕೈಗೆ ತೆಗೆದುಕೊಂಡ ಮೊಕದ್ದಮೆಗಳಲ್ಲಿ ಸೋಲಿಲ್ಲದಂತೆ ಮುಂದುವರಿದರು. ಜೊತೆಯ ವಕೀಲರು ಇವರ ಉನ್ನತಿ ಕಂಡು ಅಚ್ಚರಿಗೊಂಡರು. ಇವರಿಗಿಂತ ಹಿಂದಿನಿಂದಲೂ ವಕೀಲ್ ವೃತ್ತಿ ನಡೆಸುತ್ತಿದ್ದ ಹಳೆಯ ಹುಲಿಗಳು ಸಹ ಇವರ ಪ್ರಗತಿ ನೋಡಿ ಕರುಬುವಂತಾಯಿತು. ಒಂದೆರಡು ವರ್ಷಗಳಲ್ಲೇ ಇವರು ಚಿತ್ರದುರ್ಗದ ವಕೀಲ ಸಂಘದಲ್ಲಿ ತಮ್ಮದೇ ಪ್ರತ್ಯೇಕ ಸ್ಥಾನ ಗಳಿಸಿಕೊಂಡರು.

ನಿಜಲಿಂಗಪ್ಪನವರು ಇದ್ದಕ್ಕಿದ್ದ ಹಾಗೆ ರಾಜಕೀಯಕ್ಕೆ ಧುಮುಕಿದ ವ್ಯಕ್ತಿಯಲ್ಲ. ಹಿಂದುಮುಂದೆ ನೋಡಿ ಮೆಲ್ಲಗೆ ಒಳಗಿಳಿದ ವ್ಯಕ್ತಿ. ಅವರ ಪ್ರಕೃತಿಯೇ ಅಷ್ಟು ನಿಧಾನ, ಶಾಂತ. ವಿದ್ಯಾರ್ಥಿಯಾಗಿದ್ದಾಗಲೇ ಖಾದಿಧಾರಿಗಳಾಗಿದ್ದರು. ಗಾಂಧಿಸಾಹಿತ್ಯ ಪಾರಾಯಣ, ಗಾಂಧಿತತ್ವ, ಪರಿಪಾಲನೆಗಳನ್ನು ತಮ್ಮ ಜೀವನದಲ್ಲಿ ಮೊದಲೇ ಅನುಷ್ಠಾನಕ್ಕೆ ತಂದಿದ್ದರು. ಈಗ ಅವುಗಳಲ್ಲೇ ಮುಳುಗಿಹೋಗಿದ್ದಾರೆ.

ಕಾಂಗ್ರೆಸ್ಸಿಗೆ ಸೇರುವುದಕ್ಕೆ ಮುನ್ನ ಇವರನ್ನು ಅರಿತಿದ್ದವರು ಬಹಳ ಮಂದಿ ಇಲ್ಲ. ಕಾಂಗ್ರೆಸ್ಸಿಗೆ ಸೇರಿದ ಮೇಲೂ ಬೇಗ ಬೆಳಕಿಗೆ ಬರಲಿಲ್ಲ. ನಿಜಲಿಂಗಪ್ಪನವರು ಸದ್ದಿಲ್ಲದ ಪ್ರಗತಿ. ಡೋಲು ಡಬ್ಬಾಳಿಕೆಯಿಲ್ಲ. ಒಳಗೊಳಗೆ ಹಿಗ್ಗುತ್ತ ಹಿರಿದಾಗುತ್ತ ನಿಧಾನವಾಗಿ ಹರಿಯುವ ಗಂಗಾ ನದಿಯಂತೆ ಇವರ ಸ್ವಭಾವ. ಪ್ರವಾಹ ಬಂದಾಗ ಹಳ್ಳತಿಟ್ಟುಗಳನ್ನು ತೀಡಿಕೊಂಡು ಹೋಗುವ ಸಿಂಧೂ ನದಿಯಂತಲ್ಲ. ಇವರ ರಾಜಕೀಯ ನಿಧಾನವಾಗಿ ಗಂಭೀರವಾಗಿ ಸಾಗಿದೆ. ಅದು ಅಷ್ಟೇ ದೃಢವಾಗಿಯೂ ಇದೆ.

## ಚುನಾವಣೆಗಳೆಂದರೆ ದೂರವೇ?

ರಾಜಕೀಯ ಕುಶಲರಾಗಿರುವಂತೆ ನಿಜಲಿಂಗಪ್ಪನವರು ವ್ಯವಹಾರ ಕುಶಲರೂ ಆಗಿದ್ದಾರೆ. ವಾಣಿಜ್ಯ ಕುಶಲರೂ ಆಗಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಯಾವ ಕಂಪನಿಯೇ ಸ್ಥಾಪಿತವಾಗಲಿ, ಯಾವ ಸಂಸ್ಥೆಯೇ

ಸ್ಥಾಪಿತವಾಗಲಿ ಇದಕ್ಕೆ ನಿಜಲಿಂಗಪ್ಪನವರ ಅಭಿಮತಬೇಕು, ಅನುಮತಿ ಬೇಕು. ಅವರ ಸೂಚನೆ ಸಲಹೆಗಳಿಗೆ ಹೆಚ್ಚು ಮನ್ನಣೆ. ಎಷ್ಟೋ ಜನರಿಗೆ ಸೂಕ್ತಸಲಹೆಗಳನ್ನು ಇತ್ತು ಸಂಸ್ಥೆಗಳನ್ನು ಕಟ್ಟಿಸಿದ್ದಾರೆ, ಬೆಳೆಯಿಸಿದ್ದಾರೆ. ಐಮಂಗಲ ಖಾದಿಕೇಂದ್ರಕ್ಕೆ ಇವರದು ಸಂಪೂರ್ಣ ಸಹಕಾರ. ಇವರ ಬೆಂಬಲದಿಂದ ಅದರ ಉನ್ನತಿ ಎಂದರೆ ತಪ್ಪಾಗಲಾರದು. ಹೀಗಿದ್ದರೂ, ಮುಂದೆ ನುಗ್ಗುವ ವ್ಯಕ್ತಿಯಲ್ಲ. ಯಾವಾಗಲೂ ಹಿಂಬದಿಯೇ. ಎಲೆಯ ಮರೆಯ ಕಾಯಿಯಂತೆ.

ಶಾಸನ ಸಭೆಗಳಲ್ಲಿ ಮತ್ತು ಸ್ಥಳೀಯ ಸಂಸ್ಥೆಗಳಲ್ಲಿ ಸದಸ್ಯರಾಗಿ ದುಡಿಯ ಬೇಕೆಂಬ, ಇಚ್ಛೆಯಾಗಲೀ, ಅಧಿಕಾರ ಲಾಲಸೆಯಾಗಲೀ ನಿಜಲಿಂಗಪ್ಪನವರಿ ಗಿಲ್ಲ. ಆದ್ದರಿಂದಲೇ ಅವರು ಚುನಾವಣೆಗಳೆಂದರೆ ದೂರನಿಲ್ಲುತ್ತಾರೆ. ಅವುಗಳ ತಂಟೆಗೆ ಹೋಗುವುದಿಲ್ಲ. ಇವರ ಮಿತ್ರರರು ಹಲವರು ಅಧಿಕಾರದ ಆಸೆ ತೋರಿಸಿದರು. ಇವರು ಆ ಕಡೆಗೆ ತಮ್ಮ ಮೋರೆಯನ್ನೂ ಸಹ ತಿರುಗಿಸ ಲಿಲ್ಲ. ತಾಳ್ಮೆ, ಗಾಂಭೀರ್ಯ, ನಿಸ್ವಾರ್ಥ ಸೇವೆಗಳಿಂದ ಮುಂದಾಳುಗಳ ಶ್ರೇಣಿಯಲ್ಲಿ ಇವರು ಒಂದು ಸ್ಥಾನಗಳಿಸಿದ್ದಾರೆ.

೧೯೩೭ ರಲ್ಲಿ ಕಾಂಗ್ರೆಸ್ ಚುನಾವಣೆಗಳಲ್ಲಿ ಭಾಗವಹಿಸಲು ನಿರ್ಧರಿಸಿತು. ಆಗ ಚಿತ್ರದುರ್ಗ ಜಿಲ್ಲೆಯಿಂದ ನ್ಯಾಯವಿಧಾಯಕ ಸಭೆಗೆ ನಿಲ್ಲಬೇಕೆಂದು ನಿಜಲಿಂಗಪ್ಪನವರಿಗೆ ತಿಳಿಸಲಾಯಿತು. ಇಚ್ಛೆಯಿಲ್ಲದಿದ್ದರೂ ಆಜ್ಞಾಬದ್ಧರಾಗಿ ಒಪ್ಪಿದರು. ನಿಜಲಿಂಗಪ್ಪನವರು ಚುನಾವಣೆಗೆ ನಿಲ್ಲುವ ರೆಂದರೆ ಎದುರಿಸಿ ನಿಲ್ಲಬಲ್ಲವರಾರು ? ಇವರ ಹೆಸರು ಕೇಳುತ್ತಿದ್ದಂತೆಯೇ ನಿಲ್ಲಬೇಕೆಂದಿದ್ದವರು ಸಹ ಹಿಂದೆಗೆದರು. ಇವರು ಪ್ರತಿಸ್ಪರ್ಧಿಗಳಿಲ್ಲದೆ ನ್ಯಾಯವಿಧಾಯಕ ಸಭೆಗೆ ಚುನಾಯಿತರಾಗಿ ಬಂದರು. ಆದರೇನು ? ಮೂರನೆಯ ವರ್ಷವೇ ರಾಜೀನಾಮೆ ಕೊಡಬೇಕೆಂದು ಅಖಿಲ ಮೈಸೂರ್ ಕಾಂಗ್ರೆಸ್ ಸಮಿತಿಯು ಹೇಳಿತು. ಬಹು ಸಂತೋಷದಿಂದ ರಾಜೀ ನಾಮೆ ಇತ್ತರು. ರೋಗಿ ಬಯಸಿದ್ದೂ ಹಾಲು ಅನ್ನ. ವೈದ್ಯ ಹೇಳಿದ್ದೂ ಹಾಲು ಅನ್ನ.

**ಸೆರೆಮನೆಯ ಸುಖ**

ನಿಜಲಿಂಗಪ್ಪನವರು ಭಾಷಣಮಾಡಲು ವೇದಿಕೆಯ ಮೇಲೆ ನಿಂತರೆ, ಸಿಡಿಲು ಗುಡುಗುಗಳೇನು ಕಂಡುಬರುವುದಿಲ್ಲ. ಭಾಷಣದಲ್ಲಿಯೂ ಇರವ ಕೋಮಲ ಮನೋವೃತ್ತಿ ಕಂಡುಬರುತ್ತದೆ. ಮಾತಿನಲ್ಲಿ ಆರ್ಭಟವಿಲ್ಲ. ಆವೇಶದಿಂದ ಮಾತನಾಡಿ ಜನರನ್ನು ರೊಚ್ಚಿಗೆಬ್ಬಿಸುವ ಶಕ್ತಿಯೂ ಇಲ್ಲ. ಕೇಳುವವರನ್ನು ತಲೆದೂಗಿಸಿ ಪರವಶತೆಯಲ್ಲಿ ಮುಳುಗಿಸುವಂತಹ ಪಾಂಡಿತ್ಯ ಪ್ರಭಾವವೂ ಇಲ್ಲ. ಅದು ಗಂಭೀರ ಮನೋವೃತ್ತಿಯ, ನಿರ್ಮಲ ಮನಸ್ಸಿನ ಉಪನ್ಯಾಸಕರ ಉಪನ್ಯಾಸವಿದ್ದಂತೆ ಇರುತ್ತದೆ. ಕೇಳುವವರ ಮನದಲ್ಲಿ ರೂಪಗೊಂಡು ನಿಲ್ಲುವಂತೆ ಸ್ಪಷ್ಟವಾಗಿ ಮಾತನಾಡುತ್ತಾರೆ.

ನಿಜಲಿಂಗಪ್ಪನವರ ಅದೃಷ್ಟ ಅವರನ್ನು ಹೆಚ್ಚು ವೇಳೆ ಕಾರಾಗೃಹಕ್ಕೆ ತಳ್ಳಲಿಲ್ಲ. ಅದಕ್ಕೆ ಅವರು ಹಿಂಜರಿಯುವ ಮನುಷ್ಯರೂ ಅಲ್ಲ. ಆದರೆ ೧೯೩೯ ರಲ್ಲಿ ಆರಂಭವಾದ ಅರಣ್ಯ ಸತ್ಯಾಗ್ರಹದಲ್ಲಿ ಇವರಿಗೆ ೩ ವರ್ಷ ಕಠಿಣ ಶಿಕ್ಷೆ ಕೊಡಲಾಯಿತು. ಸೆರೆಮನೆಯಲ್ಲಿ ಬಹು ಕಷ್ಟಕ್ಕೆ ಒಳಗಾದರು. ಬಂದ ಕಷ್ಟಗಳನ್ನೆಲ್ಲಾ ಸಂತೋಷದಿಂದ ಆಲಂಗಿಸಿದರು.

ಬೊಂಬಾಯಿನಲ್ಲಿ ನಡೆದ ಅಖಿಲಭಾರತ ಕಾಂಗ್ರೆಸ್ ಸಮಿತಿಯಲ್ಲಿ ಭಾಗವಹಿಸುವ ಉದ್ದೇಶದಿಂದ ನಿಜಲಿಂಗಪ್ಪನವರು ಅಧ್ಯಕ್ಷರೊಂದಿಗೆ ಬೊಂಬಾಯಿಗೆ ಪ್ರಯಾಣ ಬೆಳೆಸಿದರು. ಅಲ್ಲಿನ ಕಾರ್ಯಕಲಾಪಗಳಲ್ಲಿ ಭಾಗವಹಿಸಿ ಮಹಾತ್ಮರನ್ನು ನೋಡಬೇಕೆಂದಿರುವಷ್ಟರಲ್ಲೇ ಮಹಾತ್ಮರ ದಸ್ತಗಿರಿಯಾಯಿತು. ಆದ್ದರಿಂದ ಬೊಂಬಾಯಿನಿಂದ ಬೆಂಗಳೂರಿಗೆ ಹಿಂತಿರುಗಿದರು. ಫ್ರೆಂಚರಾಕ್ಸ್ ಬಳಿ ಅಖಿಲ ಮೈಸೂರ್ ಕಾಂಗ್ರೆಸ್ ಸಮಿತಿಯ ಸಭೆ ಸೇರಿಸಲು ಅನೇಕ ಏರ್ಪಾಟುಗಳನ್ನು ನಡೆಯಿಸಬೇಕಾಗಿತ್ತು. ಆದರೆ ಮೈಸೂರು ಸರ್ಕಾರ ಇವರನ್ನು ಬೆಂಗಳೂರಿಗೆ ಬರಲು ಕೂಡ ಅವಕಾಶ ಕೊಡದಂತೆ, ಯಶವಂತಪುರದಲ್ಲೇ ದಸ್ತಗಿರಿಮಾಡಿ ಸ್ಥಾನ ಬದ್ಧತೆಯಲ್ಲಿಟ್ಟಿತು. ಇದರ ಪರಿಣಾಮವಾಗಿ ನಿಜಲಿಂಗಪ್ಪನವರು ಸುಮಾರು ೧೬ ತಿಂಗಳುಗಳ ಕಾಲ ಜೈಲಿನಲ್ಲೇ ಇರಬೇಕಾಯ್ತು.

## ಸರ್ವ ಜನಪ್ರಿಯ

ಚಿತ್ರದುರ್ಗ ಜಿಲ್ಲೆಯಲ್ಲಿ ಇವರೊಬ್ಬ ವಿರೋಧರಹಿತ ನಾಯಕರು. ನಾಯಕಪಟ್ಟ ಜಿಲ್ಲೆಯ ಜನರು ಇವರಿಗಿತ್ತ ಕಾಣಿಕೆ. ನಿಜಲಿಂಗಪ್ಪನವರನ್ನೆದುರಿಸುವ ರಾಜಕೀಯ ಎದುರಾಳಿ ಯಾರು ಇಲ್ಲವೆಂದು ಜಿಲ್ಲೆಯವರೆಲ್ಲರೂ ಒಪ್ಪಿಕೊಳ್ಳುತ್ತಾರೆ. ಅದರಂತೆ ಅವರು ಜಿಲ್ಲೆಯ ಪ್ರೀತಿಯ ನಾಯಕರಾಗಿ ಉಳಿದಿದ್ದಾರೆ. ಅಂತಹ ಪ್ರೀತಿ ವಿಶ್ವಾಸಕ್ಕೆ ಇವರ ನಿಸ್ವಾರ್ಥ ಸೇವೆ, ನಿಷ್ಕಳಂಕ ಮನಸ್ಸೇ ಕಾರಣ. ಕಾನೂನು ವಿದ್ಯಾಭ್ಯಾಸದ ಪರಿಣಾಮವಾಗಿ ಇವರ ಮನೋವೃತ್ತಿಯು ತರ್ಕಮಯವಾಗಿರಬೇಕಾಗಿದ್ದರೂ, ಅದು ಮಹಾತ್ಮರ ಶಾಂತಿ ಮತ್ತು ಅಹಿಂಸೆ ತತ್ವಕ್ಕೆ ಸಿಕ್ಕಿ ಮೃದುವಾಗಿದೆ.

ಬಡವರೆಂದರೆ ನಿಜಲಿಂಗಪ್ಪನವರಿಗೆ ಬಹಳ ಕನಿಕರ. ಮೊದಲು ಬಡತನದ ಬೇಗೆ ಇವರಿಗೆ ತಾಕಿತ್ತು. ಅದರ ಪರಿಣಾಮವೋ ಏನೋ, ದಲಿತ ಜನಾಂಗ ಕಂಡರೆ ಕರಗಿಹೋಗುತ್ತಾರೆ. ಅವರಿಗಾಗಿ ಏನು ಸೇವೆ ಮಾಡಬೇಕಾದರೂ ಸಿದ್ಧ. ಗಾಳಿ, ಮಳೆ, ಬಿಸಿಲುಗಳನ್ನು ನೋಡದೆ ದರಿದ್ರರ ಸೇವೆಗೈದ ಪ್ರಸಂಗಗಳು ಎಷ್ಟೋ ಉಂಟು.

ನಮ್ಮ ಹಿರಿಯಾಳುಗಳ ಪೈಕಿ ಅನೇಕರ ವಿಚಾರದಲ್ಲಿ ಜನ ಒಂದಿಲ್ಲೊಂದು ಸಣ್ಣಪುಟ್ಟ ಕೊರತೆಯನ್ನು ಹೊರಿಸಿ ಹೇಳುವುದುಂಟು. ಆದರೆ ನಿಜಲಿಂಗಪ್ಪನವರ ಬಗ್ಗೆ ಯಾರೂ ಅಂತಹ ಕೊರತೆಗಳುಂಟೆಂದು ಹೇಳಿದುದನ್ನು ನಾನು ಕೇಳಿಲ್ಲ. ಆ ಬಗ್ಗೆ ಯಾರೂ ಬೆರಳು ತೋರಿಸುವಂತಿಲ್ಲ. ತಮ್ಮ ನಡೆನುಡಿ ಆಚಾರ ವಿಚಾರಗಳಲ್ಲಿ ಎಲ್ಲರಿಗಿಂತಲೂ ಒಂದು ಮೆಟ್ಟಲು ಮೇಲಿದ್ದಾರೆನ್ನಬಹುದು. ಅದೇ ಅವರ ಸರ್ವ ಜನಾದರಣೀಯ ವ್ಯಕ್ತಿತ್ವಕ್ಕೆ ಮೂಲಕಾರಣ.

ನಿಜಲಿಂಗಪ್ಪನವರನ್ನು ರಾಜಕಾರಣಪಟುಗಳ ಪಂಕ್ತಿಯಲ್ಲಿ ಸೇರಿಸುವುದಕ್ಕಿಂತ ರಾಷ್ಟ್ರೀಯ ಸೇವಕರ ಶ್ರೇಣಿಯಲ್ಲಿ ಸೇರಿಸುವುದು ಸರಿಹೋಗುತ್ತದೆ. ರಾಜಕೀಯವನ್ನು ಕರತಲಾಮಲಕ ಮಾಡಿಕೊಂಡಿ

ದ್ದರೂ ರಾಜಕಾರಣಪಟುವಾಗಿರಬೇಕೆಂಬ ಇಚ್ಛೆ ಅವರಿಗಿಲ್ಲ. ರಾಷ್ಟ್ರ ಸೇವೆಯೊಂದೇ ಅವರ ಗುರಿ. ಅದರಿಂದ ಜನರಿಗೆ ಆಗುವ ಪ್ರಯೋಜನವೇ ಅವರಿಗೆ ತೃಪ್ತಿ.

## ಪ್ರಧಾನ ಕಾರ್ಯದರ್ಶಿಯ ಪಟ್ಟ

ಕಾಂಗ್ರೆಸ್ಸಿನ ಕಾರ್ಯಾಕಾರಿ ಸಮಿತಿಯಲ್ಲಿ ಹಲವು ವರ್ಷಗಳಿಂದ ಇದ್ದರೂ ನಿಜಲಿಂಗಪ್ಪನವರು ಅಧಿಕಾರಸ್ಥಾನಗಳಿಗೆ ಅಂಟಿಕೊಳ್ಳುತ್ತಿರಲಿಲ್ಲ. ಅಂತಹ ಜವಾಬ್ದಾರಿ ಕೆಲಸಗಳಿಂದ ದೂರವಿರಬೇಕೆಂಬುದು ಅವರ ಇಚ್ಛೆ. ಆದರೇನು? ಇವರ ಚತುರತೆ, ಕಾರ್ಯನಿರ್ವಹಣ ಶಕ್ತಿ ಸಮಿತಿಗೆ ತಿಳಿದಿತ್ತು. ಆದ್ದರಿಂದಲೇ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿಯ ಪಟ್ಟ ಇವರ ಕೊರಳಿಗೆ ಬಿತ್ತು. ಇವರನ್ನು ಆರಿಸಿಕೊಂಡ ಅಧ್ಯಕ್ಷ ಸುಬ್ರಹ್ಮಣ್ಯ ರವರನ್ನೂ, ಇವರನ್ನೂ ನೋಡಿ ಜನರು ರಾಮಲಕ್ಷ್ಮಣರಂತಹ ಜೊತೆ ಯೆಂದು ಕರೆಯುತ್ತಿದ್ದರು. ಜೊತೆಯೂ ಹಾಗೆಯೇ ಇತ್ತು.

ಈ ರಾಮಲಕ್ಷ್ಮಣರು ಸ್ವತಂತ್ರ ದೇವತೆಯನ್ನು ಹಿಡಿದು ತರಲು ದಕ್ಷರಾಗಿದ್ದರು. ಆದರೆ ಈ ಜೋಡಿ ಕಾರ್ಯಾರಂಭ ಮಾಡುವುದಕ್ಕೆ ಮುನ್ನವೇ ಕಾರಾಗೃಹವನ್ನು ಕಾಣಬೇಕಾಗಿ ಬಂತು. ಬೊಂಬಾಯಿನಲ್ಲಿ ನಡೆದ ಅಖಿಲಭಾರತ ಕಾಂಗ್ರೆಸ್ ಸಮಿತಿಯ ಸಮ್ಮೇಳನಕ್ಕೆ ಹೋಗಿ ಬರುತ್ತಿದ್ದ ಹಾಗೆಯೇ ಸರಕಾರ ಇವರನ್ನು ಹಿಡಿದು ಜೈಲಿನಲ್ಲಿ ಇಟ್ಟಿತು. ಕಾಂಗ್ರೆಸ್ ಸಮಿತಿಗಳನ್ನು ನ್ಯಾಯಬಾಹಿರವೆಂದು ಸಾರಿ ಕಾರ್ಯಕಲಾಪ ನಡೆಯಿಸಿದಂತೆ ಮಾಡಿತು.

ಕಾಂಗ್ರೆಸ್ಸಿನ ಕಾರ್ಯದರ್ಶಿಗಳಾಗಿ ಕಾರ್ಯ ತೃಪ್ತಿಕರವಾಗಿ ಮಾಡ ಲಿಲ್ಲವೆಂಬ ಕೂಗು ಇದ್ದರೂ ಕಾಂಗ್ರೆಸ್ಸಿನ ಕಾರ್ಯಕರ್ತೃಗಳೆಲ್ಲಾ ಇವರನ್ನು ಬಹುಮತದಿಂದ ಅಧ್ಯಕ್ಷ ಗದ್ದುಗೆಗೆ ಏರಿಸಿದ್ದಾರೆ. ಅದು ಅವರು ಗಳಿಸಿರುವ ಸರ್ವ ಜನಾದರಣೀಯತೆಯ ಕುರುಹು.

ಜೈಲು ಜೀವನದಲ್ಲಿ ನಿಜಲಿಂಗಪ್ಪನವರು ರಕ್ತಹೀನತೆಯಿಂದ ನರಳ

ಬೇಕಾಗಿ ಬಂದಿತ್ತು. ಆದರೂ ಅಲ್ಲಿ ಇವರಷ್ಟು ಹರ್ಷಚಿತ್ತರಾಗುತ್ತಿದ್ದವರು ಮತ್ತಿನ್ನಾರೂ ಇಲ್ಲವೆಂದರೆ ಅತಿಶಯೋಕ್ತಿಯಲ್ಲ. ಯಾವಾಗಲೂ ನಗು ಮುಖ. ಪ್ರಸನ್ನಚಿತ್ತತೆ. ನಿಶ್ಚಿಂತರಾಗಿ ಕಾಲಕಳೆಯುತ್ತಿದ್ದರು.

ಏಳು ಮಕ್ಕಳ ಈ ತಂದೆ ತಮ್ಮ ಮಕ್ಕಳ ರಕ್ಷಣೆಯನ್ನು ಬದಿಗೊತ್ತಿ ಎಪ್ಪತ್ತುಲಕ್ಷ ಪ್ರಜೆಗಳ ಉದ್ಧಾರಕ್ಕಾಗಿ ಹೊರಟಿದ್ದಾರೆ. ಇವರ ಮಕ್ಕಳೂ ಸಹ ಮಮತೆಯಿಂದ ತಮ್ಮ ತಂದೆಯ ಈ ರಾಷ್ಟ್ರಸೇವಾ ಕಾರ್ಯವನ್ನು ಈಕ್ಷಿಸುತ್ತಿದ್ದಾರೆ.



## ಎನ್. ಸಿ. ತಿಮ್ಮಾರೆಡ್ಡಿ

ಐದು ಅಡಿಗಿಂತ ಕೊಂಚ ಎತ್ತರವಿರುವ ದೃಢಕಾಯ ಬುದ್ಧ ಶರೀರ. ಅಗಲವಾದ ಎದೆ. ಬಲವಾದ ಮೈಕಟ್ಟು. ಅದು ಕಲ್ಲಿನಂತಹ ದೇಹ. ವಜ್ರದಂತಹ ಹೃದಯ. ಅದರಲ್ಲಿ ಗುಂಡಿನೇಟಿಗೆ ಎದೆಕೊಟ್ಟು ನಿಲ್ಲುವ ಧೈರ್ಯವಿದೆ. ಅದು ಅವರ ಮೋರೆಯಲ್ಲಿ ಎದ್ದು ಕಾಣುತ್ತದೆ. ಆ ಪೈಲ್ವಾನ್ ದೇಹವನ್ನು ನೋಡಿ ಎಷ್ಟು ವರ್ಷಗಳ ಅಂಗಸಾಧನೆಯ ಫಲವೆಂದು ಜನರು ಕೇಳುವುದು ಸ್ವಾಭಾವಿಕ. ಅವರೇ ನಾಗಸಂದ್ರದ ತಿಮ್ಮಾರೆಡ್ಡಿಯವರು.

**ವಿದ್ಯಾಭ್ಯಾಸ**

ರೆಡ್ಡಿಯವರು ಬಾಳಿಬದುಕಿದ ಬಲ್ಲಿಗ ಮನೆತನದಲ್ಲಿ ಹುಟ್ಟಿದವರು. ಗೋರಿಬಿದನೂರು ತಾಲ್ಲೂಕು ನಾಗಸಂದ್ರದ ಚಿನ್ನಪ್ಪರೆಡ್ಡಿಯವರೇ ಇವರ ತಂದೆಯವರು. ಚಿನ್ನಪ್ಪರೆಡ್ಡಿಯವರು ಸುಮಾರು ೧೨೦೦ ರೂಪಾಯಿಗಳ ಕಂದಾಯ ಕೊಡುವ ದೊಡ್ಡ ಜಮೀನುದಾರರು. ತಿಮ್ಮಾರೆಡ್ಡಿಯವರೇ ಕಿರಿಯ ಮಗ. ಇನ್ನೂ ನಾಲ್ಕು ಜನ ಹಿರಿಯ ಸೋದರರು ಇದ್ದಾರೆ. ಅವರಲ್ಲಿ ಇಬ್ಬರು ಪದವೀಧರರು. ಗ್ರಾಮಾಂತರ ರೈತ ಮನೆತನದಲ್ಲಿ ಜನಿಸಿದ ರೆಡ್ಡಿಯವರು ರಾಜಕೀಯಕ್ಕೆ ಇಳಿದು ರಾಜಕಾರಣಪಟುವಾಗುವರೆಂದು ಅವರ ಮನೆಯವರೇ ಊಹಿಸಿರಲಿಲ್ಲ.

ರೆಡ್ಡಿಯವರಿಗೆ ಎಳೆಯ ವಯಸ್ಸಿನಲ್ಲಿ ನಾಗಸಂದ್ರದಲ್ಲೇ ವಿದ್ಯಾಭ್ಯಾಸ. ತರುವಾಯ ನಾಲ್ಕು ಮೈಲಿ ದೂರದಲ್ಲಿದ್ದ ಗೋರಿಬಿದನೂರಿಗೆ ಪ್ರತಿದಿನವೂ ನಡೆದುಕೊಂಡು ಹೋಗಬೇಕಾಗಿ ಬಂತು. ಈ ರೀತಿ ಮಾಧ್ಯಮಿಕ ವಿದ್ಯಾಭ್ಯಾಸವನ್ನು ರೆಡ್ಡಿಯವರು ಗೋರಿಬಿದನೂರಿನಲ್ಲಿ ಮೂರು ವರ್ಷಗಳಲ್ಲಿ ಮುಗಿಸಿಕೊಂಡು ಬೆಂಗಳೂರಿಗೆ ಬಂದರು. ಪ್ರೌಢ ಶಾಲೆಯಲ್ಲಿ ಪ್ರೌಢ ಶಿಕ್ಷಣವೂ, ಸೈಂಟ್ ಜೋಸಫ್ ಕಾಲೇಜಿನಲ್ಲಿ ಎಂಟ್ರೆನ್ಸ್ ಪರೀಕ್ಷೆಯೂ ನಡೆಯಿತು. ಪರೀಕ್ಷೆಯಲ್ಲಿ ಉತ್ತೀರ್ಣರಾದೊಡನೆ ಬಿ.ಎ. ಓದಲೋಸುಗ ಮೈಸೂರಿಗೆ ತೆರಳಿದರು.

ಮೈಸೂರಿನ ವಿದ್ಯಾಭ್ಯಾಸ ರೆಡ್ಡಿಯವರಿಗೆ.ಹೆಚ್ಚು ಜ್ಞಾನ ಕೊಟ್ಟಿತು. ಅರ್ಥಶಾಸ್ತ್ರ ನಿಪುಣರಾದ ಶ್ರೀ ಎನ್. ಎಸ್. ಸುಬ್ಬರಾಯರ ಪರಮ ಶಿಷ್ಯರಾದರು. ಪ್ರಗತಿಪರ ತರುಣನೆಂಬುದು ರಾಯರ ಮನಸ್ಸಿಗೆ ತಿಳಿಯಿತು. ಆದ್ದರಿಂದ ಇವರ ಮೇಲೆ ಕೊನೆಯವರಿಗೂ ಒಂದು ಕಣ್ಣಿಟ್ಟೇ ಇದ್ದರು. ೧೯೨೪ರಲ್ಲಿ ರೆಡ್ಡಿಯವರಿಗೆ ಬಿ.ಎ. ಪರೀಕ್ಷೆಗೆ ಕುಳಿತುಕೊಳ್ಳಬೇಕೆಂಬ ಇಚ್ಛೆ ಬರಲಿಲ್ಲ. ಮನಸ್ಸು ಬೇರೆ ಕಡೆಗೆ ತಿರುಗಿತು.

## ಉಪಸಂಪಾದಕ

ರೆಡ್ಡಿಯವರ ಬಾಳು ಅವರ ಮನೆತನದ ಬಾಳಿನಷ್ಟೇ ದೊಡ್ಡ ಬಾಳು, ಉದಾರಿಗಳು. ಕೊಡುಗೈ ಗುಂಪಿಗೆ ಸೇರಿದವರು. ಯಾವ ಕೆಲಸ ಮಾಡಿದರೂ ಮನವೊಪ್ಪುವಂತೆ ಸಂಪೂರ್ಣವಾಗಿ ಮಾಡಬೇಕು. ಇದಕ್ಕೆ ರೆಡ್ಡಿಯವರು ಏರ್ಪಡಿಸಿದ್ದ ವಿದುರಾಶ್ವತ್ಥ ಅಧಿವೇಶನದ ಏರ್ಪಾಡುಗಳೇ ಸಾಕ್ಷಿ. ವಿದುರಾಶ್ವತ್ಥ ಅಧಿವೇಶನದಲ್ಲಿ ಹಾಕಿದ್ದ ಚಪ್ಪರಗಳೂ, ಕಟ್ಟಿದ್ದ ಊಟದ ಮನೆಗಳೂ, ವಸತಿಗಳೂ ಮತ್ತು ವಸ್ತುಪ್ರದರ್ಶನದ ಏರ್ಪಾಡುಗಳನ್ನು ಯಾರೂ ಮರೆಯುವಂತಿಲ್ಲ. ಎಲ್ಲಾ ಲಕ್ಷ ಜನರಿಗೆ ಬೇಕಾಗುವಷ್ಟು ವಸತಿ ಏರ್ಪಾಟು. ಎಲ್ಲವೂ ಬೃಹದಾಕಾರವೇ! ಆದರೆ ಅದರ ಸದುಪಯೋಗಕ್ಕೆ ವಿಧಿ ಅವಕಾಶ ಕೊಡದೆ ಒಂದೇ ಸವನೆ ಎರಡು ದಿನಗಳು ಮಳೆಗರೆದು ಹಾಳುಮಾಡಿತು.

ವಿದ್ಯಾಭ್ಯಾಸ ಬಿಟ್ಟೊಡನೆ ತಿಮ್ಮಾರೆಡ್ಡಿಯವರು ತಿಪಟೂರಿನ ಮಾಧ್ಯಮಿಕ ಶಾಲೆಯಲ್ಲಿ ಎರಡು ವರ್ಷಗಳ ಕಾಲ ಉಪಾಧ್ಯಾಯರಾಗಿದ್ದರು. ಸರ್ಕಾರಿ ನೌಕರನಾಗಿ ಉಪಾಧ್ಯಾಯ ವೃತ್ತಿಯಲ್ಲೂ ಸಹ ಜನಸೇವೆ ಮಾಡಲು ಸಾಧ್ಯವಾಗುವುದಿಲ್ಲವೆಂಬುದು ರೆಡ್ಡಿಯವರ ಮನಸ್ಸಿಗೆ ಬಂದುದೇ ತಡ, ಉಪಾಧ್ಯಾಯ ವೃತ್ತಿಯನ್ನು ಬಿಟ್ಟರು. ಮನಸ್ಸು ಪತ್ರಿಕೋದ್ಯಮದ ಕಡೆಗೆ ತಿರುಗಿತು. 'ಸ್ವರಾಜ್ಯ' ಪತ್ರಿಕೆಯಲ್ಲಿ ಒಂದು ಸ್ಥಾನವೂ ಸಿಕ್ಕಿತು. ಶ್ರೀಮಾನ್ ಪ್ರಕಾಶಂರವರ ಕೈಕೆಳಗೆ 'ಸ್ವರಾಜ್ಯ' ಪತ್ರಿಕೆಯಲ್ಲಿ ಉಪಸಂಪಾದಕರಾಗಿ ಎರಡು ವರ್ಷಗಳ ಕಾಲ ವೃತ್ತಪತ್ರಿಕೋದ್ಯಮ ನಡೆಸಿದರು.

ಪತ್ರಿಕೋದ್ಯಮ ಯಾವಾಗಲೂ ತೋಫಿನ ಮುಂದೆ ನಿಂತಂತೆ. ಗುಂಡು ಯಾವಾಗ ಹಾರುವುದೋ ಹೇಳಲಾಗುವುದಿಲ್ಲ. ಅದರಲ್ಲೂ ಗುಂಡು ಹಾರಿಸಲು ಸಿದ್ಧವಿರುವ ಈ ಸರ್ಕಾರದ ಮುಂದೆ ಪತ್ರಿಕೆಗಳನ್ನು ನಡೆಯಿಸುವುದು ಕಷ್ಟ. ಅಂತಹುದರಲ್ಲಿ 'ಸ್ವರಾಜ್ಯ' ಹೇಗೆ ತಾನೆ ಮುಂದುವರೆದೀತು? ಸರ್ಕಾರ ಗದಾಪ್ರಹಾರಮಾಡಿ ಕೊಂದುಬಿಟ್ಟಿತು. ಇದರ ಪರಿಣಾಮವಾಗಿ ರೆಡ್ಡಿಯವರ ಪತ್ರಿಕೋದ್ಯೋಗ ಅಲ್ಲಿಗೇ ನಿಂತಿತು. ಪತ್ರಿಕೋದ್ಯೋಗಿಯಾಗಿರಬೇಕೆಂಬ ಹಂಬಲ, ಹುಚ್ಚು ಈಗಲೂ ಅವರನ್ನು ಬಿಟ್ಟಿಲ್ಲ. ಅದನ್ನು ಅವರು ಬಿಡುವಂತೆಯೂ ಇಲ್ಲ. ಸ್ವರಾಜ್ಯ ಪತ್ರಿಕೆಯು ನಿಂತ ಮೇಲೆ ಬಿ.ಎಲ್. ಪರೀಕ್ಷೆಗೆ ಕುಳಿತು, ಉತ್ತೀರ್ಣರಾಗಿ ವಕೀಲಿ ವೃತ್ತಿಯನ್ನು ಕೈಕೊಳ್ಳಲು ಸಿದ್ಧರಾದರು.

### ಶಾಂತಿವಾದಿಯಲ್ಲ ಕ್ರಾಂತಿವಾದಿ

ತಿಮ್ಮಾರೆಡ್ಡಿಯವರು ಶಾಂತಿವಾದಿಗಳಲ್ಲ; ಕ್ರಾಂತಿವಾದಿಗಳು. ಅಹಿಂಸಾವಾದಕ್ಕಿಂತ ಹಿಂಸಾವಾದದಲ್ಲಿ ಇವರಿಗೆ ಹೆಚ್ಚು ನಂಬಿಕೆ. "ಶಾಂತಿಯಿಂದ ಸಾಮ್ರಾಜ್ಯ ಗೆಲ್ಲುವುದು ಅಸಾಧ್ಯದ ಮಾತು. ರಕ್ತಪಾತದಿಂದ ರಾಜ್ಯಕಟ್ಟಬೇಕು, ಅದಕ್ಕೆ ಕ್ರಾಂತಿ ಅವಶ್ಯಕ"ವೆಂದು ಅವರ ವಾದ, ಆದರೂ ಕಾಂಗ್ರೆಸ್ಸಿನ ತತ್ವಕ್ಕೆ ತಲೆಬಾಗಿ ಅಹಿಂಸೆಯನ್ನು ಅಂಗೀಕರಿಸಿದ್ದಾರೆ.

ರೆಡ್ಡಿಯವರು ಸ್ವಭಾವತಃ ಧೀರರು. ಸದ್ಗುಣಿಗಳು, ಕಲ್ಲೆದೆಯವರು. ಅವರಲ್ಲಿ ದಯೆಯಿಲ್ಲ, ದಾಕ್ಷಿಣ್ಯವಿಲ್ಲ. ಕೊಂಕುಕಪಟಗಳನ್ನು ಹತ್ತಿರ ಬರಗೊಡಿಸುವುದಿಲ್ಲ—ನೇರವಾದ ಹಾದಿ ಅವರದು. ಆ ಹಾದಿಯಲ್ಲಿ ಬರುವ ಕಲ್ಲು, ಬಂಡೆ, ಹಳ್ಳ ತಿಟ್ಟುಗಳ ಯೋಚನೆಯೇ ಇಲ್ಲ. ಅನೇಕ ವೇಳೆ ಅವರ ಮಾತು ಕೆಲವರಿಗೆ ಸಿಡಿಲಾಗುತ್ತದೆ. ಅವರ ಒರಟು ಮಾತೇ ಅದಕ್ಕೆ ಕಾರಣ. ಆದ್ದರಿಂದಲೇ ಅವರಿಗೆ ಹೆಚ್ಚು ಮಿತ್ರರಿಲ್ಲ, ಹೆಚ್ಚು ಸಲಿಗೆಯನ್ನು ಅಪೇಕ್ಷಿಸುವುದೂ ಇಲ್ಲ. ಇತರರೂ ಸಹ ಇವರ ಗೆಳೆತನವನ್ನು ಇಚ್ಛಿಸುವುದಿಲ್ಲ. ಯಾವಾಗಲೂ ಒಂದಲ್ಲ ಒಂದು ಯೋಚನೆಯಲ್ಲಿ ಮಗ್ನರಾಗಿರುತ್ತಾರೆ. ಆ ದೀರ್ಘಾಲೋಚನೆಯ ಮುಖಭಂಗಿ ಸದಾ ಅವರ ಸಿಡುಕು ಮೋರೆಯ ಮೇಲೆ ಕಾಣಬರುತ್ತಲೇ ಇರುತ್ತದೆ.

**ಬಿ. ಎಲ್.**

ಬಿ. ಎಲ್. ಪರೀಕ್ಷೆಯನ್ನು ಕೊಟ್ಟು ಬಂದಮೇಲೆ ವಕೀಲಿ ವೃತ್ತಿಗೆ ಸ್ಥಳಬೇಕಾಗಿತ್ತು. ಬೆಂಗಳೂರು, ಕೋಲಾರ, ದೊಡ್ಡಬಳ್ಳಾಪುರ, ಗುಂಟೂರು ಹೀಗೆ ನಾಲ್ಕೈದು ಸ್ಥಳಗಳು ಅವರ ಮುಂದೆ ಇದ್ದಾವು. ಜೊತೆಗೆ ರಾಜಕೀಯ ಜ್ಞಾನ ಆ ವೇಳೆಗೆ ರೆಡ್ಡಿಯವರ ಹೃದಯದಲ್ಲಿ ಆಂದೋಳನ ನಡೆಸಿತ್ತು. ಪ್ರಕಾಶಂರವರ ಪರಮಶಿಷ್ಯ—ಪರಮ ಮಿತ್ರರಂತೆ ಇದ್ದು, ಇವರಿಗೆ ಆಂಧ್ರಪ್ರಾಂತದ ರಾಜಕೀಯ ಮನಸ್ಸಿನಲ್ಲಿ ಮಥಿಸುತ್ತಿದ್ದರೂ ದೊಡ್ಡಬಳ್ಳಾಪುರದಲ್ಲಿ ನೆಪಮಾತ್ರಕ್ಕೆ ವಕೀಲಿ ವೃತ್ತಿಯನ್ನು ಆರಂಭಿಸಿದರು. ಆ ಮೇಲೆ ಮೈಸೂರು ರಾಜಕಾರಣವನ್ನೆಲ್ಲಾ ಆಮೂಲಾಗ್ರವಾಗಿ ತಿಳಿದುಕೊಳ್ಳಲು ಅವಕಾಶವಾಯ್ತು.

ರೆಡ್ಡಿಯವರು ೧೯೨೦ ರಲ್ಲೇ ಅಖಿಲ ಭಾರತ ಕಾಂಗ್ರೆಸ್ಸಿನ ಸದಸ್ಯರಾಗಿದ್ದರು. ಅಂದಿನಿಂದಲೂ ಖಾದಿಯ ಹೊರತಾಗಿ ಬೇರೆ ಬಟ್ಟೆ ಉಡುತ್ತಿಲ್ಲ. ಮಾಂಸಾಹಾರಿ ಮನೆತನದವರಾದರೂ ಕಾಂಗ್ರೆಸ್ಸಿಗೆ ಸೇರಿದೊಡನೆ ಮಾಂಸಾಹಾರ ಮಾಡುವುದಿಲ್ಲವೆಂದು ಪ್ರತಿಜ್ಞೆಮಾಡಿದ್ದಾರೆ. ಅದನ್ನು ೨೪ ವರ್ಷಗಳಿಂದಲೂ ಪಾಲಿಸಿಕೊಂಡು ಬಂದಿದ್ದಾರೆ.

ದೊಡ್ಡಬಳ್ಳಾಪುರದಲ್ಲಿ ವಕೀಲ್ ವೃತ್ತಿಯನ್ನು ಆರಂಭಿಸುವ ಮೊದಲು ಅವರಿಗೆ ಆಂಧ್ರ ಕಾಂಗ್ರೆಸ್ ಸಮಿತಿಯ ಕರೆ ಬಂದಿತ್ತಂತೆ. ಆಂಧ್ರ ಮಿತ್ರರೆಲ್ಲರೂ ತಮ್ಮೆಡೆಗೆ ರೆಡ್ಡಿಯವರನ್ನು ಸೆಳೆದುಕೊಳ್ಳಲು ಪ್ರಯತ್ನ ನಡೆಯಿಸಿದರಂತೆ. ಆದರೆ ಮೈಸೂರು ಯುವಕನೆಂಬ ಕೆಚ್ಚೆದೆಯ ರೆಡ್ಡಿಯವರು 'ನನ್ನ ಭಾಗದ ಸೇವೆ ಮೈಸೂರಿನಲ್ಲೇ ನಡೆಸುತ್ತೇನೆ' ಎಂದುಬಿಟ್ಟರಂತೆ.

**ಅನ್ನಪೂರ್ಣಾದೇವಿ**

ಇವರ ಜೀವನಕ್ಕೆ ಕಳೆಕೊಟ್ಟವರೆಂದರೆ ಇವರ ಧರ್ಮಪತ್ನಿ ಶ್ರೀಮತಿ ಅನ್ನಪೂರ್ಣಾದೇವಿ. ಅನ್ನಪೂರ್ಣಾದೇವಿಯವರು ಗುಂಟೂರಿನ ಶಾರದಾ ನಿಕೇತನದಲ್ಲಿ ತರಬೇತಾದ ವೀರ ತರುಣಿ. ಹಿಂದಿ, ತೆಲಗು, ಸಂಸ್ಕೃತಗಳನ್ನು ಚೆನ್ನಾಗಿ ಅಭ್ಯಸಿಸಿದ್ದಾರೆ. ಸಂಗೀತದಲ್ಲಿ ಹೆಚ್ಚಿನ ಪರಿಶ್ರಮವಿದೆ.

ದೇಶಸೇವಕಿಯಂತೆ ಬಾಳುವ ದಕ್ಷತೆ ಇದೆ. ಇರುವ ಇಚ್ಛೆಯೂ ಇದೆ. ಆದರೆ ಅದಕ್ಕೆ ಅವಕಾಶವಿಲ್ಲದಂತೆ ಆ ಇಚ್ಛೆ ಅದುಮಿ ಹಿಡಿಯಲ್ಪಟ್ಟಿದೆ. ಸಂಪೂರ್ಣ ರಾಷ್ಟ್ರ ಸೇವಾಮನೋಭಾವ ಆಕೆಯದು, ಭಾಷಣಮಾಡಲು ನಿಂತರೆ ಜನರ ಹೃದಯವನ್ನು ಕೆರಳಿಸಿ, ಉಕ್ಕಿಸಬಲ್ಲ ಶಕ್ತಿ ಇದೆ. ರೆಡ್ಡಿಯವರು ರಾಜದ್ರೋಹದ ಅಪಾದನೆಗೆ ಗುರಿಯಾಗಿ ಮನೆಯಲ್ಲಿದ್ದಾಗ್ಯೆ ಅನ್ನಪೂರ್ಣಮ್ಮನವರು ಕೋಲಾರಜಿಲ್ಲಾ ಪ್ರವಾಸ ಕೈಗೊಂಡು ಅವಿಶ್ರಾಂತಪ್ರಚಾರ ನಡೆಯಿಸಿದ್ದಾರೆ.

ಸರ್ಕಾರವೂ ಸಹ ಅನ್ನಪೂರ್ಣಮ್ಮನವರ ಭಾಷಣ ನೋಡಿ ಬೆಚ್ಚಿ ಮೂಗಿನ ಮೇಲೆ ಬೆರಳು ಇಟ್ಟುಕೊಂಡಿದೆ. ರಮೇಶಂ ಸಮಿತಿಯ ವರದಿಯಲ್ಲಿ ಇವರ ಭಾಷಣಗಳನ್ನು ಉದಹರಿಸಿ ಕ್ರಾಂತಿಕಾರಕ ಭಾಷಣಗಳೆಂದಿದ್ದಾರೆ. ಈ ಮಟ್ಟದ ವಿದ್ಯೆ, ವಿಚಾರ ಕ್ರಾಂತಿಯುಳ್ಳ ವೀರಮಹಿಳೆಯನ್ನು ಅರ್ಧಾಂಗಿಯನ್ನಾಗಿ ಪಡೆದಿರುವ ಸೌಭಾಗ್ಯ, ಮೈಸೂರು ಕಾಂಗ್ರೆಸ್ಸಿನ ಮುಂದಾಳುಗಳ ಶ್ರೇಣಿಯಲ್ಲಿ ಒಬ್ಬಿಬ್ಬರಿಗೆ ಮಾತ್ರ ಉಂಟು. ಇಂತಹ ಭಾಗ್ಯ ತಿಮ್ಮಾರೆಡ್ಡಿಯವರ ಸುಕೃತದ ಫಲ.

## ಸಿಡಿಲಿನಂತಹ ಕೂಗು

ಪ್ರಕಾಶಂರವರು ಮೈಸೂರಿಗೆ ಯಾವಾಗ ಬರಲಿ ತಿಮ್ಮಾರೆಡ್ಡಿಯವರೊಡನೆ ತಂಗುತ್ತಿದ್ದರು. ಪಟ್ಟಾಭಿ ಸೀತಾರಾಮಯ್ಯನವರಿಗೂ ಸಹ, ಇವರ ಮೇಲೆ ಅಷ್ಟೇ ವಿಶ್ವಾಸ. ಇದು ಸರ್ಕಾರದ ಕಣ್ಣಿಗೆ ಬೀಳದೆ ಹೋಗಲಿಲ್ಲ. ಜೊತೆಗೆ ಪ್ರಜಾಪಕ್ಷ ಮತ್ತು ಕಾಂಗ್ರೆಸ್ಸಿನ ಸಮ್ಮಿಳಿತದಲ್ಲಿ ಇವರ ಕೈವಾಡ; ರಾಜಕಾರಣ ಪಟುಗಳೊಡನೆ ಇವರ ಓಡಾಟ ಇವು ಸರ್ಕಾರದ ಕಣ್ಣನ್ನು ಕುಕ್ಕಿದುವು. ಆದ್ದರಿಂದ ಇವರನ್ನು ಆದಷ್ಟು ಬೇಗ ಮಟ್ಟಹಾಕಬೇಕೆಂದು ಮನಸ್ಸುಮಾಡಿ ೧೯೩೭ ನೇ ಅಕ್ಟೋಬರ್ ೧೫ ರಲ್ಲಿ ರಾಜದ್ರೋಹಕ್ಕೆಂದು ದಸ್ತಗಿರಿಮಾಡಿದರು. ವಿಚಾರಣೆಯಾಗಿ ೨ ವರ್ಷಗಳ ಕಠಿಣಶಿಕ್ಷೆ ೧೦೦೦ ರೂಪಾಯಿಗಳ ಜುಲ್ಮಾನೆ ವಿಧಿಸಲಾಯಿತು. ಅಂದಿನಿಂದಲೇ ಮೈಸೂರಿನ ಜನತೆ ತಿಮ್ಮಾರೆಡ್ಡಿಯವರ ಹೆಸರನ್ನು ಅರಿತುಕೊಳ್ಳಲು ಆರಂಭಿಸುದುದು.

ರೆಡ್ಡಿಯವರು ಭಾಷಣಮಾಡಲು ನಿಂತರೆ ಶರಾವತಿಯ ಪ್ರವಾಹ ದಂತಹ ಆರ್ಭಟ. ಸಿಡಿಲಿನಂತಹ ಘರ್ಜನೆ. ಧಾಟಿಗೆ ತಡೆಯಿಲ್ಲ. ಮಳೆಗಾಲದಲ್ಲಿ ಹೊಳೆ ಹರಿದಂತೆ ಭೋರ್ಗರೆಯುತ್ತಾ ಹೋಗುತ್ತದೆ. ಅಡ್ಡ ಬಂದ ಕಸ, ಕಡ್ಡಿ, ಕಲ್ಲು, ಮರಗಳು ಕೊಚ್ಚಿಕೊಂಡು ಹೋಗಲೇಬೇಕು. ವಿರೋಧಕ್ಕಾಗಿ ನಿಂತರೆ ತೀರಿತು. ಖಂಡ ತುಂಡ ಮಾತುಗಳು. ಬೆಂಕಿಯ ಮಳೆ ಸುರಿದಂತೆ. ಅದಕ್ಕೆ ನಿಯಮನೀತಿಗಳ ಲೆಕ್ಕವೂ ಇರುವುದಿಲ್ಲ. ಎದು ರಾಳಿಗಳು ಬಿದ್ದರೂ ಮುಗ್ಗರಿಸಿ ಮಣ್ಣು ಮುಕ್ಕಿದರೂ ಬಿಡದೆ ಹಠ ಸಾಧಿಸುವ ದಿಟ್ಟತನ. ಕೆರಳಿದರೆ ಗಂಡುಗೊಡಲಿಯ ಪರಶುರಾಮನ ಅಪರಾವತಾರ.

ರಾಜದ್ರೋಹಕ್ಕೆಂದು ೨ ವರ್ಷ ಶಿಕ್ಷೆಗೊಳಗಾಗಿದ್ದ ಇವರನ್ನು ೪ ತಿಂಗಳನಂತರ ಶಿವಮೊಗ್ಗಾ ಜೈಲಿನಿಂದ ಬಿಡುಗಡೆ ಮಾಡಲಾಯ್ತು. ಆದರೆ ಪುನರ್‌ವಿಚಾರಣೆಗಾಗಿ ಜೈಲ್‌ಗೇಟ್ ಬಳಿಯೇ ಮತ್ತೊಮ್ಮೆ ದಸ್ತಗಿರಿ ಮಾಡಿದರು. ಸಂಸ್ಥಾನಗಳ ವಿಚಾರದಲ್ಲಿ ಮಹಾತ್ಮರ ಪ್ರವೇಶದ ಫಲವಾಗಿ ಕೆಲವು ದಿನಗಳಲ್ಲೇ ಮತ್ತೆ ರೆಡ್ಡಿಯವರ ಬಿಡುಗಡೆಯಾಗಬೇಕಾಯ್ತು.

ಭಾಷ್ಯಂರವರು ಜೈಲಿನಲ್ಲಿದ್ದಾಗ್ಯೆ ರೆಡ್ಡಿಯವರು ಬೆಂಗಳೂರು ಗಿರಿಣಿ ಅಧ್ಯಕ್ಷರಾಗಿ ಕೆಲಸಮಾಡಿದ್ದಾರೆ. ಕೂಲಿಕಾರ ಮಂಡಳಿಗೆ ರೆಡ್ಡಿಯವರ ಮೇಲೆ ಬಹಳ ಅಭಿಮಾನ. ಕ್ರಾಂತಿ ಬೇಕೆಂದು ಕಾತರಿಸುತ್ತಿರುವ ಸುಭಾಷ ಬೋಸರ ಮಾರ್ಗ ಸರಿಯೆಂದು ಹೇಳುವ ತಿಮ್ಮಾರೆಡ್ಡಿಯವರಿಗೆ ಮಹಾತ್ಮರ ರಚನಾತ್ಮಕ ಕಾರ್ಯಗಳಲ್ಲೂ ಆಸಕ್ತಿ ಇದೆ. ಆದ್ದರಿಂದಲೇ ಮೈಸೂರು ಕಾಂಗ್ರೆಸ್ಸಿನ ರಚನಾತ್ಮಕ ಕಾರ್ಯಕ್ರಮದ ಉಪಸಮಿತಿಗೆ ರೆಡ್ಡಿಯವರೇ ಕಾರ್ಯದರ್ಶಿಗಳಾಗಬೇಕಾಗಿ ಬಂತು. ಆದರೆ ಕಾರ್ಯ ನಡೆಸಲು ಜೈಲು ವಾಸಗಳು ರೆಡ್ಡಿಯವರಿಗೆ ಹೆಚ್ಚು ಅವಕಾಶ ಕೊಡಲಿಲ್ಲ. ಅದಕ್ಕೆ ಪ್ರತಿಯಾಗಿ ಪ್ರತಿದಿನವೂ ತಾವೇ ನೂಲು ತೆಗೆಯುವ ಕಾರ್ಯವನ್ನಿಟ್ಟುಕೊಂಡು ತೃಪ್ತಿಪಟ್ಟುಕೊಳ್ಳುತ್ತಿದ್ದಾರೆ.

**ಜೈಲು ವಾಸಗಳು**

೧೯೩೦ ರ ಆಗಸ್ಟ್ ತಿಂಗಳಲ್ಲಿ ರೆಡ್ಡಿಯವರ ಮೇಲೆ ಮತ್ತೆ ರಾಜದ್ರೋಹ ಮೊಕದ್ದಮೆಯೊಂದನ್ನು ಹೂಡಲಾಯ್ತು. ಅದರಲ್ಲಿ ೨|| ವರ್ಷ ಶಿಕ್ಷೆ.

ಮತ್ತು ೫೦೦ ರೂಪಾಯಿ ಜುಲ್ಮಾನೆ ವಿಧಿಸಿದರು. ಈ ಶಿಕ್ಷೆಯ ಬಹು ಭಾಗವನ್ನು ಅವರು ಶಿವಮೊಗ್ಗ ಜೈಲಿನಲ್ಲೇ ಕಳೆದರು. ಮತ್ತೆ ೧೯೪೨ ಆಗಸ್ಟ್ ತಿಂಗಳ ಬಿರುಗಾಳಿಗೆ ಸಿಕ್ಕಿ ಸುಮಾರು ೧೬ ತಿಂಗಳಕಾಲ ಸ್ಥಾನ ಬದ್ಧತೆಯಲ್ಲಿದ್ದರು. ರೆಡ್ಡಿಯವರ ತ್ಯಾಗ ಬಹಳ ಹೆಚ್ಚಿನದೆಂದೇ ಹೇಳಬೇಕು. ತಮ್ಮ ಸಹೋದರ ನಾಗಯ್ಯ ರೆಡ್ಡಿಯವರನ್ನೂ ಜೈಲಿಗೆ ಕಳುಹಿಸಿ, ಪತ್ನಿಯವರನ್ನು ಕೆಲಕಾಲ ರಾಜಕಾರಣಕ್ಕೆ ಇಳಿಸಿ ತಾವೂ ಸಹ ಕಷ್ಟವನ್ನು ಸಂತೋಷದಿಂದ ಅನುಭವಿಸುತ್ತಿದ್ದಾರೆ.

ಪಟೇಲ್-ಮಿರ್ಜಾ ಒಪ್ಪಂದವಾಗುವ ವೇಳೆ ತಿಮ್ಮಾರೆಡ್ಡಿಯವರು ಹಿಂದೆನಿಂತು ಬಹಳ ಕೆಲಸಮಾಡಿದರು. ಸುಖವಾಗಿ ಶಾಸನ ಸಭೆಗಳಲ್ಲಿ ಕುಳಿತು ಸೇವೆ ಮಾಡುವೆನೆಂದು ಹೇಳುವ ರಾಜಕಾರಣ ರೆಡ್ಡಿಯವರಿಗೆ ಒಗ್ಗದ ಮಾತು. ಆದ್ದರಿಂದಲೇ ಚುನಾವಣೆಗಳಿಗೆ ನಿಲ್ಲಬೇಕೆಂಬ ಆಸೆಯಿಂದ ದೂರವಾಗಿದ್ದಾರೆ.

ರೆಡ್ಡಿಯವರದು ಕೊಂಚ ದುಡುಕಿನ ಸ್ವಭಾವ. ಆ ದುಡುಕಿನ ಸ್ವಭಾವದ ಪರಿಣಾಮವಾಗಿ ಅವರ ಜೀವನದ ಆಗುಹೋಗುಗಳು ಎಷ್ಟೋ ಬದಲಾಗಿವೆ. ಕಾಂಗ್ರೆಸ್ಸಿನಲ್ಲೂ ಹಲವು ವೇಳೆ ಅವರ ದುಡುಕಿನ ಸ್ವಭಾವದಿಂದ ಏರುಪೇರುಗಳಾಗಿವೆ, ಅನಾಹುತಗಳಾಗಿವೆ. ಮನಸ್ಸಿಗೆ ಏನಾದರೂ ಒಮ್ಮೆ ಅಂಟಿತೆಂದರೆ ಅದನ್ನು ಸುಲಭವಾಗಿ ಬಿಡುವಂತಿಲ್ಲ. ಮಾಡಿದ ನಿರ್ಣಯವನ್ನು, ಹಿಡಿದ ಹಟವನ್ನು ಸಾಧಿಸಬೇಕೆಂಬ ದಿಟ್ಟತನ ಹೆಚ್ಚು. ಅದು ತಪ್ಪೆಂದು ತಿಳಿದರೂ ಬೇಗನೆ ತಲೆಬಾಗುವ ಸೌಜನ್ಯವಿಲ್ಲ. ಅದು ಅವರ ಗುಣ.

ಕ್ರಾಂತಿಕಾರ ಮನೋಭಾವನೆಯನ್ನು ತರುಣರಲ್ಲಿ ಬಿತ್ತಿ, ಪ್ರಚಂಡ ಸೈನ್ಯವನ್ನು ಸಿದ್ಧಗೊಳಿಸಿ ನಮ್ಮ ಮಾತೃಭೂಮಿಯನ್ನು ನಾವು ಗೆಲ್ಲಬೇಕೆಂದು ಕನಸು ಕಾಣುತ್ತಿರುವ ದೇಶಭಕ್ತರಲ್ಲಿ ರೆಡ್ಡಿಯವರೂ ಒಬ್ಬರು. ಇವರ ಕನಸು ನನಸಾಗುವುದನ್ನು ನೋಡಬೇಕಾಗಿದೆ. ಏಕಾಗಬಾರದೆಂಬುದೇ ಪ್ರಶ್ನೆ?



## ಕೆ. ಚಂಗಲರಾಯರೆಡ್ಡಿ

ಸಾವಿರದ ಒಂಭೈನೂರ ಮೂವತ್ತೇಳನೇ ಅಕ್ಟೋಬರ್ ಹದಿನಾರು. ಈ ದಿನವನ್ನು ಮೈಸೂರು ಕಾಂಗ್ರೆಸ್ಸಿನ ಮುಂದಾಳುಗಳಾಗಲೀ, ಕೆಲಸಗಾರರಾಗಲೀ ಅಥವಾ ಅಭಿಮಾನಿಗಳಾಗಲೀ, ಮರೆಯುವುದುಂಟೆ? ಮೈಸೂರು ಕಾಂಗ್ರೆಸ್ಸಿನ ಇತಿಹಾಸದಲ್ಲಿ ಅದೊಂದು ಚಿರಸ್ಮರಣೀಯವಾದ ದಿನ. ಮೈಸೂರು ಕಾಂಗ್ರೆಸ್ಸಿನ ಭವ್ಯ ಭವನದ ಗೋಪುರಕ್ಕೆ ಕೀರ್ತಿಯ ಕಲಶವನ್ನಿಟ್ಟ ದಿನ. ಆಗ ಮೈಸೂರು ಕಾಂಗ್ರೆಸ್ಸನ್ನು ಉರುಳಿಸಬಲ್ಲ ಬಲವಾದ ರಾಜಕೀಯ ಸಂಸ್ಥೆಯೊಂದು ಮೈಸೂರಿನಲ್ಲಿ ಬೆಳಗುತ್ತಿತ್ತು. ಮೈಸೂರಿನ ಮಹಾ ಮುಖಂಡರುಗಳು ಪ್ರಜಾ ಸಂಯುಕ್ತ ಸಂಸ್ಥೆಯೆಂಬ, ಆ ಸಂಸ್ಥೆಯಲ್ಲಿ ಸೇರಿ ಮೈಸೂರು ಸರ್ಕಾರವನ್ನೂ ಸಹ ಬೆದರಿಸುತ್ತಿದ್ದರು.

ಈ ಪ್ರಚಂಡ ರಾಜಕೀಯ ಸಂಸ್ಥೆಯನ್ನು ಪ್ರತಿಭಟಿಸಿ ಚುನಾವಣೆಗೆ ನಿಲ್ಲಿಸಬೇಕಾದ ಸಂದರ್ಭ ಮೈಸೂರು ಕಾಂಗ್ರೆಸ್ಸಿಗೆ ಬಂತು. ಮೈಸೂರು ಕಾಂಗ್ರೆಸ್ಸಿಗೆ ಆಗ ಇನ್ನೂ ಬಾಲ್ಯಾವಸ್ಥೆ. ಚುನಾವಣೆಯಲ್ಲಿ ಬಹುಭಾಗ ಪ್ರಜಾ ಸಂಯುಕ್ತ ಸಂಸ್ಥೆಯೇ ಜಯಶೀಲವಾಯಿತು. ಸತ್ಯ, ಅಹಿಂಸೆಗಳ ಅಸ್ತಿವಾರದಮೇಲೆ ಬೆಳೆಯಲಾರಂಭಿಸಿದ್ದ ಮೈಸೂರು ಕಾಂಗ್ರೆಸ್ಸಿಗೆ ಇದೊಂದು ಮಹಾ ಸಮಸ್ಯೆಯಾಗಿ ಪರಿಣಮಿಸಿತು. ಮೈಸೂರು ಜನತೆಗೆ ಪ್ರಜಾ ಸಂಯುಕ್ತ ಸಂಸ್ಥೆಯಲ್ಲಿದ್ದ ಮುಖಂಡರಮೇಲೆ ಹೆಚ್ಚು ಮಮತೆ, ವಿಶ್ವಾಸಗಳಿತ್ತೇ ಹೊರತು, ಮೈಸೂರು ಕಾಂಗ್ರೆಸ್ ಮುಂದಾಳುಗಳ ಮೇಲಲ್ಲ. ಈ ಎರಡು ಸಂಸ್ಥೆಗಳ ಧ್ಯೇಯ ಸಾಧನೆಗಳು ಒಂದೇ ಆಗಿದ್ದರೂ ಸಹ ಎರಡೂ ಮಿಲನವಾಗುವಂತಿರಲಿಲ್ಲ. ಅಂತಹ ಸಂದಿಗ್ಧ ಸಮಯದಲ್ಲಿ ಈ ಎರಡು ಪಕ್ಷಗಳ ಏಕೀಕರಣಕ್ಕೆ ಅವಿಶ್ರಾಂಶವಾಗಿ ದುಡಿದ ಮಹಾ ವ್ಯಕ್ತಿಯೆಂದರೆ ಕ್ಯಾಸಂಬಳ್ಳಿಯ ಚಂಗಲರಾಯರೆಡ್ಡಿಯವರು. ಇವರು ಮಾಡಿದ ಈ ಮಹತ್ಕಾರ್ಯಕ್ಕೆ ಮೈಸೂರು ಕಾಂಗ್ರೆಸ್ ಚಿರಋಣಿಯಾಗಿದೆ.

ಅನೇಕ ಮಹನೀಯರುಗಳು ಈ ಏಕೀಕರಣಕಾರ್ಯಕ್ಕೆ ಕೈಹಾಕಿ

ದ್ದರೂ ಸಹ ಅವರು ಜಯಶೀಲರಾಗಿರಲಿಲ್ಲ. ಎರಡು ಪಂಗಡಗಳಲ್ಲೂ ಪೂರ್ಣ ವಿಶ್ವಾಸ ಗಳಿಸಿಕೊಂಡಿದ್ದವರೆಂದರೆ ಚಂಗಲರಾಯರೆಡ್ಡಿಯವರೊಬ್ಬರೆ. ಪ್ರಜಾ ಸಂಯುಕ್ತ ಪಕ್ಷದ ಅಧ್ಯಕ್ಷರಾಗಿದ್ದರೂ ಸಹ ಅವರ ಹೃದಯ, ಮನಸ್ಸು ಕಾಂಗ್ರೆಸಿನಕಡೆಯೇ ಇತ್ತು. ಆದ್ದರಿಂದಲೇ ಅವರು ಬಹು ಶ್ರಮಪಟ್ಟು ೧೯೩೭ನೇ ಅಕ್ಟೋಬರ್ ೧೬ನೇ ತಾರೀಖಿನ ದಿನ ಪ್ರಜಾ ಸಂಯುಕ್ತ ಸಂಸ್ಥೆಯನ್ನು ಮೈಸೂರು ಕಾಂಗ್ರೆಸ್ಸಿನೊಂದಿಗೆ ಬೆರೆಸಿ ಮೈಸೂರು ಕಾಂಗ್ರೆಸ್ಸಿನ ಉನ್ನತಿಗೆ ಕಾರಣಭೂತರಾದರು.

## ಸೇವಾವೃತ್ತಿ ರಕ್ತಗತವಾಗಿತ್ತು

ರೆಡ್ಡಿಯವರು ಹುಟ್ಟಿದ್ದು ೧೯೦೨ನೇ ಮೇ ತಿಂಗಳು ೪ರಲ್ಲಿ. ಅವರ ಜನ್ಮಸ್ಥಳ ಬೌರಿಂಗ್‌ಪೇಟೆ ತಾಲ್ಲೂಕು ಕ್ಯಾಸಂಬಳ್ಳಿ. ರೆಡ್ಡಿಯವರಲ್ಲಿ ಇಂದು ಕಂಡುಬರುವ ಸುಗುಣಗಳೂ, ಉದಾತ್ತ ಧ್ಯೇಯಗಳೂ, ಬಾಲ್ಯದಿಂದಲೂ ಅವರಲ್ಲಿ ಬೆಳೆದು ಬಂದುವುಗಳು. ೧೯೧೮ನೇ ವರ್ಷ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು. ೧೯೨೪ರಲ್ಲಿ ಮದ್ರಾಸ್ ಪಾಚೆಯಪ್ಪ ಕಾಲೇಜಿನಲ್ಲಿ ಬಿ.ಎ. ಪರೀಕ್ಷೆಯನ್ನು ಇತ್ತು, ರಾಜಾ ರಾಮಸ್ವಾಮಿ ಮೊದಲಿಯಾರ್‌ರವರ ಸುವರ್ಣ ಪದಕವನ್ನು ಪಡೆದರು. ೧೯೨೬ರಲ್ಲಿ ಬಿ.ಎಲ್. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಆದರೆ ವಕೀಲ್ ವೃತ್ತಿಯನ್ನು ಮಾಡಲು ಇಷ್ಟಪಡಲಿಲ್ಲ. ಪ್ರಜಾ ಸೇವಾಕಾಂಕ್ಷಿಗಳಾದ ರೆಡ್ಡಿಯವರು ೧೯೩೮ರಲ್ಲಿ ರಾಜಕೀಯ ರಂಗಕ್ಕೆ ಧುಮುಕಿದರು. ರಾಜಕೀಯಕ್ಕೆ ಕಾಲಿಟ್ಟಾಗ ಅವರಿಗಿನ್ನೂ ೨೬ ವರ್ಷ ವಯಸ್ಸು.

ರೆಡ್ಡಿಯವರು ರಾಜಕೀಯಕ್ಕೆ ಕಾಲಿಡುವ ಮುನ್ನ ರಾಜಕೀಯವಲ್ಲದ ಸಂಸ್ಥೆಗಳಲ್ಲಿ ಸೇವೆ ನಡೆಸಿದ್ದಾರೆ. ಮದರಾಸಿನಲ್ಲಿ ಓದುತ್ತಿದ್ದ ವೇಳೆ ವಿದ್ಯಾರ್ಥಿಗಳಲ್ಲಿ ಉತ್ಸಾಹ ತುಂಬಿ ಒಂದು ಯುವಜನ ಸಂಘವನ್ನು ಸ್ಥಾಪಿಸಿದರು. ಆ ಸಂಘಕ್ಕೆ ಇವರನ್ನೇ ಕಾರ್ಯದರ್ಶಿಗಳನ್ನಾಗಿ ನೇಮಿಸಲಾಗಿತ್ತು. ತಮ್ಮ ವಾಸಸ್ಥಳಕ್ಕೆ ಬಂದಮೇಲೆ ಅನೇಕಾನೇಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ಹಿಂದೀ ಪ್ರಚಾರ ಸಭೆ, ಅಡಮಾನದ ಬ್ಯಾಂಕ್ ಮುಂತಾದವು

ಗಳ ಅಧ್ಯಕ್ಷರಾಗಿಯೂ ಇದ್ದರು. ರೆಡ್ಡಿಯವರಿಗೆ ಸಾರ್ವಜನಿಕ ಸೇವೆಯು ರಕ್ತಗತವಾಗಿ ಬಂದುದೆಂದು ಹೇಳಬೇಕು. ೧೯೨೮ರಿಂದ ಇದುವರೆವಿಗೂ ಅವರು ಅನೇಕಾನೇಕ ಮಹತ್ಕಾರ್ಯಗಳನ್ನು ಮಾಡಿದ್ದಾರೆ.

ರೆಡ್ಡಿಯವರದು ಮೈಯೆಲ್ಲಾ ಕಣ್ಣು, ತೂಕ ತಪ್ಪುವುದು ಕಡಿಮೆ. ಇವರ ವರೆಗಲ್ಲು ಬಹು ನಿಖರ. ಅದು ಅಕ್ಕಸಾಲಿಗನ ಕೈವಾಡವಿದ್ದಂತೆ. ಹಿಡಿದ ಕೆಲಸವನ್ನು ಮಾಡಬೇಕೆಂಬ ಹಟವಿದ್ದರೂ ಅನೇಕವೇಳೆ ಅದನ್ನು ಸಡಿಲಿಸಿಕೊಂಡುಹೋಗುವ ಪದ್ಧತಿ. ಅವಶ್ಯಕವಿದ್ದಾಗ ಕಾಯಕ್ಲೇಶವನ್ನೂ ಸಹ ಲೆಕ್ಕಿಸದೆ ಕೆಲಸಮಾಡುತ್ತಾರೆ. ಎಲ್ಲರೊಡನೆ ಹೊಂದಿಕೊಂಡು ಕೆಲಸ ತೆಗೆದುಕೊಳ್ಳುವ ಸಾಮರ್ಥ್ಯ ಚೆನ್ನಾಗಿದೆ. ವ್ಯವಹಾರ ಕುಶಲರಾಗಿರುವಂತೆ ರೆಡ್ಡಿಯವರು ಸಂಘ ಮತ್ತು ಸಮಾಜ ಸೇವಾ ಕುಶಲರಾಗಿದ್ದಾರೆ. ಇವರದು ಬಹು ಮೃದುಹೃದಯ. ಕಷ್ಟಪಡುವವರನ್ನು ಕಂಡರೆ ಬಿಸಿಲನ್ನು ಕಂಡ ಮಂಜಿನಂತೆ ಕರಗಿಹೋಗುತ್ತಾರೆ. ಇದನ್ನು ಕಂಡು ಕೂಲಿಕಾರರೂ, ಕಾಂಗ್ರೆಸ್ ಕೆಲಸಗಾರರನೇಕರೂ ಸಹಾಯಕ್ಕಾಗಿ ಇವರನ್ನು ಮುತ್ತುತ್ತಿರುತ್ತಾರೆ. ಆ ರೀತಿ ಬಂದವರನ್ನು ಬರಿಗೈಯ್ಯಲ್ಲಿ ಕಳುಹಿಸುವುದೇ ಇಲ್ಲ. ಸ್ಥಾನಬದ್ಧತೆಯಿಂದ ಜೈಲು ಒಳಗಡೆಯಿದ್ದರೂ ಇವರ ಕೊಡುಗೈ ಕೆಳಗೆ ಇಳಿದಿರಲಿಲ್ಲ.

**ಅಪ್ರತಿಮ ರಾಜಕಾರಣಪಟು**

ಒಮ್ಮೆ ನಾನು ಮುಖಂಡರೊಬ್ಬರೊಡನೆ ಮಾತನಾಡುತ್ತಿದ್ದ ವೇಳೆ ಅವರು ರೆಡ್ಡಿಯವರ ವಿಷಯ ಹೇಳುತ್ತಾ, "ಅವರು ಕೋಲಾರ ಜಿಲ್ಲೆಯಲ್ಲಿ ಮಕುಟರಹಿತ ಮಹಾರಾಜರಂತಿದ್ದರು" ಎಂದರು. ಈ ರೀತಿ ಅವರು ಹೇಳಿದುದು ಅಕ್ಷರಶಃ ನಿಜವಾದ ಮಾತು. ಕೋಲಾರ ಜಿಲ್ಲೆಯ ಯಾವ ಮೂಲೆಯಲ್ಲಿ ಬೇಕಾದರೂ ಇವರ ಪ್ರಶಂಸೆಯನ್ನು ಕೇಳಬಹುದಾಗಿದೆ. ೧೯೩೩ರಿಂದ ೧೯೩೭ರ ವರೆಗೆ ಒಂದೇ ಸಮವಾಗಿ ಸರ್ವ ಸಮ್ಮತದಿಂದ ಕೋಲಾರ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿ ಆರಿಸಿಬಂದುದೂ, ೧೯೩೦ನೇ ವರ್ಷದಿಂದ ೧೯೩೭ನೇ ವರ್ಷದ ವರೆವಿಗೆ ನ್ಯಾಯವಿಧಾಯಕ ಸಭಾಸದಸ್ಯರಾಗಿ ಆರಿಸಿಬಂದುದೂ ಮತ್ತು ಅದೇ ವರ್ಷಗಳಲ್ಲಿ ಪ್ರಜಾಪ್ರತಿಧಿ ಸಭೆಯ

ಸದಸ್ಯರಾಗಿ ಆರಿಸಿ ಬಂದುದೂ ಇವರ ಬಗ್ಗೆ ಜಿಲ್ಲೆಯ ಜನರಿಗೆ ಇರುವ ಅಭಿಮಾನ, ಅಕ್ಕರೆಗಳನ್ನು ತೋರಿಸುತ್ತದೆ.

ರೆಡ್ಡಿಯವರು ಅದ್ಭುತ ಮೇಧಾವಿಗಳು. ಅವರ ಸ್ವಾತಂತ್ರ್ಯ ಪ್ರೀತಿ ಬಹಳ ದೃಢವಾದದ್ದು. ಅದು ಅವರ ಹುಟ್ಟುಗುಣ. ಶಾಸನ ಸಭೆಗಳಲ್ಲಿ, ಸ್ಥಳೀಯ ಸಂಸ್ಥೆಗಳಲ್ಲಿ ಅವರು ಅನುಸರಿಸಿದ ನೀತಿ, ನಡೆಯಿಸಿದ ಕಾರ್ಯಗಳೇ ಅವಕ್ಕೆ ಸಾಕ್ಷಿ. ನಮ್ಮ ನಾಡಿನ ನಾಯಕರಲ್ಲಿ ರೆಡ್ಡಿಯವರಂತಹ ರಾಜ್ಯಾಡಳಿತ ವಿಮರ್ಶಕರೂ, ತಾರ್ಕಿಕರೂ, ಅದನ್ನೇ ಪ್ರಮುಖ ಉದ್ಯೋಗವನ್ನಾಗಿ ಮಾಡಿಕೊಂಡು, ಸಂಪೂರ್ಣವಾಗಿ ಮನನ ಮಾಡಿಕೊಂಡವರೂ ಯಾರೂ ಇಲ್ಲ. ಇದು ನಿರ್ವಿವಾದವಾದ ವಿಚಾರ.

ಕೋಲಾರದ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿ ಜಿಲ್ಲೆಯ ಉನ್ನತಿಗಾಗಿ ಇವರು ನಡೆಯಿಸಿರುವ ಕಾರ್ಯಗಳೂ, ಶಾಸನ ಸಭೆಗಳಲ್ಲಿ ಹೊಡೆದಾಡಿ ಜನರಿಗೆ ದೊರೆಕಿಸಿಕೊಟ್ಟಿರುವ ಸೌಲಭ್ಯಗಳೂ ಕೋಲಾರ ಜಿಲ್ಲೆಯ ಪ್ರಜೆಗಳಲ್ಲಿ ರೆಡ್ಡಿಯವರ ಬಗ್ಗೆ ಅಪ್ರತಿಮವಾದ ಗೌರವ, ನಂಬಿಕೆಗಳನ್ನು ಬೆಳೆಯಿಸಿವೆ. ಅಂದಿನಿಂದಲೂ ರೆಡ್ಡಿಯವರಲ್ಲಿ ಇರುವ ಪ್ರೀತಿ, ವಿಶ್ವಾಸಗಳು ಅಚ್ಚಳಿಯದೆ ಅವಿಚ್ಛಿನ್ನವಾಗಿ ನಿಂತಿವೆ. ಸಾರ್ವಜನಿಕ ಸೇವೆಗಾಗಿ ಕಂಕಣ ತೊಟ್ಟಂದಿನಿಂದ ಇವರು ಅನೇಕಾನೇಕ ಸಮ್ಮೇಳನಗಳಲ್ಲಿ ಅಧ್ಯಕ್ಷತೆಯನ್ನು ವಹಿಸಿದ್ದಾರೆ. ಲೆಕ್ಕವಿಲ್ಲದಷ್ಟು ಉಪಸಮಿತಿಗಳ ಸದಸ್ಯರಾಗಿ ಕೆಲಸ ಮಾಡಿದ್ದಾರೆ. ಅವುಗಳನ್ನೆಲ್ಲಾ ಬರೆಯಬೇಕಾದರೆ ಅದೊಂದು ದೊಡ್ಡ ಪಟ್ಟಿಯೇ ಆಗುತ್ತದೆ. ಆದ್ದರಿಂದ ಅವುಗಳಲ್ಲಿ ಮುಖ್ಯವಾದವುಗಳನ್ನು ಮಾತ್ರ ಇಲ್ಲಿ ತಿಳಿಸಲು ಇಚ್ಛಿಸುತ್ತೇನೆ.

೧೯೩೧ರಲ್ಲಿ ಚಿತ್ರದುರ್ಗ ಮತ್ತು ಕೋಲಾರ ಜಿಲ್ಲೆಯ ರೈತರ ಸಮ್ಮೇಳನಗಳಲ್ಲೂ, ೧೯೩೦ರಲ್ಲಿ ಪ್ರಜಾಸಂಯುಕ್ತ ಸಂಸ್ಥೆಯ ಅಧಿವೇಶನದಲ್ಲೂ, ಅದೇ ವರ್ಷ ಒಕ್ಕಲಿಗರ ಸಮ್ಮೇಳನದಲ್ಲೂ, ೧೯೩೪ರಲ್ಲಿ ಚಿತ್ರದುರ್ಗದಲ್ಲಿ ನಡೆದ ಕಾಂಗ್ರೆಸ್ ಬೋರ್ಡ್ ಸಮ್ಮೇಳನದಲ್ಲೂ ಅಧ್ಯಕ್ಷ ಸ್ಥಾನವನ್ನು ವಹಿಸಿ ಉಜ್ವಲ ಭಾಷಣಗಳನ್ನು ಮಾಡಿದ್ದಾರೆ. ರೆಡ್ಡಿಯವರು ಅಪ್ರತಿಮ

ರಾಜಕಾರಣಪಟುಗಳೆಂಬುದಕ್ಕೆ ೧೯೩೦-೩೫ರ ವರೆವಿಗೂ "ಪ್ರಜಾಪಕ್ಷದ" ಕಾರ್ಯಕಾರಿ ಮಂಡಳಿಯ ಪ್ರಮುಖ ಸದಸ್ಯರಾಗಿದ್ದುದೂ, ೧೯೩೫-೩೭ರ ವರೆವಿಗೆ "ಪ್ರಜಾಸಂಯುಕ್ತ" ಸಂಸ್ಥೆಯ ಅಧ್ಯಕ್ಷರಾಗಿದ್ದುದೂ, ೧೯೩೭-೩೮ರ ವರೆವಿಗೆ ಮೈಸೂರು ಕಾಂಗ್ರೆಸ್ ಬೋರ್ಡಿನ ಅಧ್ಯಕ್ಷರಾಗಿದ್ದುದೂ, ೧೯೩೮-೪೦ರ ವರೆವಿಗೆ ಎರಡು ವರ್ಷಗಳಕಾಲ ಮೈಸೂರು ಕಾಂಗ್ರೆಸ್ಸಿನ ಕಾರ್ಯದರ್ಶಿಗಳಾಗಿದ್ದುದೂ, ತರುವಾಯ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದುದೂ ಸಾಕ್ಷಿಗಳಾಗಿವೆ.

## ಮಂತ್ರಿಮಂಡಲದಲ್ಲಿ ಇರಬಹುದಿತ್ತು

ರೆಡ್ಡಿಯವರು ಪಂಡಿತ ಜವಾಹರಲಾಲರಂತೆ ಆಗರ್ಭ ಶ್ರೀಮಂತರಾಗಿ ಜನಿಸಿ ಸುಮಾರು ೨೫ ವರ್ಷಗಳ ಪರ್ಯಂತ ಅಪರಿಮಿತ ಸುಖಭೋಗ, ಭಾಗ್ಯಗಳ ನಡುವೆ ಬೆಳೆದವರಾದರೂ, ರಾಷ್ಟ್ರಸೇವೆಗಾಗಿ ಒಮ್ಮೆಲೆ ಅವುಗಳನ್ನು ಬದಿಗೊತ್ತಿ ಬಡತನದ ಜೀವನವನ್ನು ಅಪ್ಪಿದರು. ಬಡ ಬೋರೇಗೌಡನ ಉನ್ನತಿಗಾಗಿ ದುಡಿಯಲು ನಿಂತರು. ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಇವರು ಮುಂದೆ ಬಂದಿರುವುದು, ಅನ್ಯರ ಅಪೇಕ್ಷೆಯಿಂದಾಗಲೀ ಅಥವಾ ಸ್ವಾರ್ಥಸಾಧನೆಗಾಗಲೀ ಅಲ್ಲ; ಸ್ವಂತ ಇಚ್ಛೆಯಿಂದ—ಅವರ ಹೃದಯದಲ್ಲಿ ಮನೆ ಮಾಡಿಕೊಂಡಿರುವ ಸ್ವಾತಂತ್ರ್ಯಾಭಿಲಾಷೆಯಿಂದ. ಅದಕ್ಕಾಗಿ ತನು, ಮನ, ಧನಗಳನ್ನೂ ಸಹ ಅರ್ಪಿಸಲು ಸಿದ್ಧರಾಗಿ ಸ್ವಾತಂತ್ರ್ಯ ಸಾಧನೆಯ ರಂಗಕ್ಕೆ ಧುಮುಕಿದ್ದಾರೆ.

ರೆಡ್ಡಿಯವರು ಇಂದಿನ ಹಾದಿಯನ್ನು ತುಳಿಯದೆ, ಕೊಂಚ ಮನಸ್ಸು ಮಾಡಿದ್ದರೆ ಈ ವೇಳೆಗೆ ಮೈಸೂರಿನ ಮಂತ್ರಿಮಂಡಲದಲ್ಲಿ ಇರಬಹುದಾಗಿತ್ತು. ಬರೀ ಮಂತ್ರಿಮಂಡಲದಲ್ಲಿರುವುದೇನು, ಮೈಸೂರಿನ ಮುಖ್ಯ ಮಂತ್ರಿ—ದಿವಾನರಾಗಿ—ಯಾಗಿರಬಹುದಾಗಿತ್ತು. ಇವರ ಬಂಧುಗಳು, ಮಿತ್ರರನೇಕರು ಈ ಬಗ್ಗೆ ಕನಸು ಕಾಣುತ್ತಿದ್ದರು. ಆದರೆ ಅವರುಗಳ ಕನಸು ನನಸಾಗಲಿಲ್ಲ. ಇವರಿಗೆ ಮೈಸೂರು ಹೈಕೋರ್ಟು ಗಾಳಹಾಕಲು ಕಾದಿತ್ತು. ಇಂತಹ ಗಾಳಕ್ಕೆ ಸುಲಭವಾಗಿ ಸಿಕ್ಕುವ ಮೀನಲ್ಲವೆಂಬುದನ್ನು ಇವರು ತಮ್ಮ ದೃಢಮನಸ್ಸಿನಿಂದ ಜನತೆಗೆ ತೋರಿಸಿಕೊಟ್ಟರು.

ಚಂಗಲರಾಯರೆಡ್ಡಿಯವರನ್ನು ನೆನಸಿಕೊಂಡೊಡನೆ ಮುಗುಳು ನಗೆಯ ಸುಮಾರು ೫|| ಅಡಿಯ ಆ ಸುಂದರಮೂರ್ತಿ, ಕಣ್ಣ ಮುಂದೆ ಬಂದು ನಿಂತಂತಾಗುವುದು. ಅಗಲವಾದ ಹಣೆ, ಮೋಟಾದ ಮೂಗು, ಪುಟ್ಟ ಬಾಯಿ, ತುಂಬಿದ ಗಲ್ಲ. ಎಳೆತನವನ್ನು ತೋರಿಸುವ ಆ ಮುಖ ಮುದ್ದಾಗಿ ಕಾಣುತ್ತದೆ. ಇವುಗಳ ಜೊತೆಗೆ ಅವರ ಅಸಮಾನ ಕಾರ್ಯಶಕ್ತಿ, ಅಪರಿಮಿತ ಉತ್ಸಾಹ, ಬಿಡುವಿಲ್ಲದ ದುಡಿತ ಆ ಬಿಳಿ ಮುಖದಲ್ಲಿ ಸ್ಪಷ್ಟವಾಗಿ ಕಾಣುತ್ತಿರುತ್ತದೆ.

ರೆಡ್ಡಿಯವರ ಬುದ್ಧಿ ಬಹಳ ಚುರುಕು. ಹರಿತ. ಸಾಣೆ ಹಿಡಿದ ಕತ್ತಿಯಂತೆ. ಕಂಡಕೂಡಲೇ ಗುಣದೋಷಗಳನ್ನು ಬೇರ್ಪಡಿಸಲು ಇರಬೇಕಾದ ಕಣ್ಣುಗಳು. ವಿಮರ್ಶೆಯಲ್ಲಿ ನಿಷ್ಪಕ್ಷಪಾತವಾಗಿ ನೋಡುವ ವಿವೇಕ. ಬಡತನದ ಬೇಗೆಯನ್ನು ಗ್ರಹಿಸಬಲ್ಲ ಸೂಕ್ಷ್ಮ ಹೃದಯ. ತಮ್ಮ ಸಿದ್ಧಾಂತ ಸಾಧಿಸಲಿಕ್ಕೆ, ಪ್ರತಿಪಕ್ಷವನ್ನು ನಿರುತ್ತರ ಮಾಡಲಿಕ್ಕೆ ಬೇಕಾದ ತರ್ಕಶಕ್ತಿ. ಅದರ ಜೊತೆಗೆ ತರ್ಕಮಾಡಲಿಕ್ಕೆ ಬೇಕಾದ ತಾಳ್ಮೆ ಇವುಗಳ ಮೇಳ ಅವರು. ಚಂಗಲರಾಯರೆಡ್ಡಿಯೆಂದರೆ ಸಾಕು ಮೈಸೂರಿನ ರಾಜಕೀಯವೇ ಮೈದೋರಿಬಂದು ಮುಂದೆ ನಿಂತಂತಾಗುವುದು. ಅದು ಮೈಸೂರು ರಾಜಕೀಯಕ್ಕೆ ಅವರು ಮಾಡಿರುವ ಸ್ವಾರ್ಥರಹಿತ ಸೇವೆಯ ಗುರುತು.

## ದೂರದೃಷ್ಟಿ ಸಾಲದೇ?

ಇಷ್ಟಾದರೂ ದೂರದೃಷ್ಟಿ ರಹಿತರೆಂಬ ಆಪಾದನೆ ರೆಡ್ಡಿಯವರಿಗೆ ತಪ್ಪಿಲ್ಲ; ಅನೇಕವೇಳೆ ಇವರು ಅನ್ಯರ ಮಾತನ್ನು ಕೇಳಿ ವಿವೇಚನಾರಹಿತರಂತೆ—ಹುಡುಗರಂತೆ—ವರ್ತಿಸಿರುವುದು ಉಂಟೆಂದು ಅವರ ಆಪ್ತಮಿತ್ರರೊಬ್ಬರು ನನಗೆ ತಿಳಿಸಿದರು. ಇದು ನಿಜವೆಂಬುದಕ್ಕೆ ಒಂದೆರಡು ಕಾರಣಗಳಿದ್ದರೂ ಅವರ ಸ್ವಾರ್ಥರಹಿತ ಸೇವೆಯಲ್ಲಿ ಈ ಪುಟ್ಟ ವಿಚಾರಗಳು ಪ್ರವಾಹದಲ್ಲಿನ ಸಣ್ಣ ಕಡ್ಡಿಯಂತೆ ಕೊಚ್ಚಿಹೋಗುತ್ತವೆ ಎಂಬುದು ಎಲ್ಲರಿಗೂ ಮನವರಿಕೆಯಾಗಿದೆ. ಗೊಂದಲ, ಘರ್ಷಣೆಗಳ ಕಾಲದಲ್ಲಿ ತತ್ವವನ್ನೂ ಸಹ ಮರೆತು ಅಂತಹ ಗೊಂದಲ, ಘರ್ಷಣೆಗಳಿಗೆ ಅವಕಾಶ ಕೊಡಬಾರದೆಂದು ಇವರು ವಾದಮಾಡುವುದೂ ಉಂಟು.

ರೆಡ್ಡಿಯವರು ಒಂದು ಬಾರಿಯಲ್ಲ ಮೂರು ನಾಲ್ಕು ಬಾರಿ ಅಖಿಲ ಭಾರತವನ್ನೆಲ್ಲಾ ಸುತ್ತಿದ್ದಾರೆ. ಎಲ್ಲಾ ಪ್ರಾಂತ್ಯಗಳ ಜನರ ಪರಿಚಯವಿದೆ. ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯರಾಗಿದ್ದ ವೇಳೆ ಅನೇಕ ಮುಖಂಡರ ಮಿತ್ರತ್ವ ಬೆಳೆಯಿಸಿಕೊಂಡಿದ್ದಾರೆ.

ರೆಡ್ಡಿಯವರ ಜೀವನದಲ್ಲಿ ಆಡಂಬರವಿಲ್ಲ. ಬಲ್ಲಿಗರ ಮನೆತನದಲ್ಲಿ ಜನಿಸಿದೆನೆಂಬ ಅಹಂಕಾರವಿಲ್ಲ. ಇದ್ದುದ್ದರಲ್ಲಿ ತೃಪ್ತಿಪಡಬೇಕೆಂಬುದನ್ನು ಇತರರಿಗೆ ತಿಳಿಸುತ್ತಿರುವಂತೆ ತಾವೂ ಸಹ ಅನುಸರಿಸುತ್ತಿದ್ದಾರೆ. ಇವರ ಉಡುಪೂ ಸಹ ಕೇವಲ ಸಾಮಾನ್ಯ ಮಟ್ಟದ್ದು. ಒಂದು ಪಂಚೆ, ಒಂದು ಷರಟು, ಒಂದು ಬಿಳೀ ಟೋಪಿ, ಇದ್ದರೆ ಹೆಗಲಮೇಲೆ ಒಂದು ಅಂಗವಸ್ತ್ರ. ತೀರಿತು ಇವರ ಆಡಂಬರ. "ನಿಮ್ಮ ಹಿಂದಿನ ಜರತಾರಿ ಪೇಟಗಳು ಈಗ ಎಲ್ಲಿ? ಎಂದು ಒಮ್ಮೆ ನಾನು ಅವರನ್ನು ಪ್ರಶ್ನಿಸಿದಾಗ ಅಂತಹ ಬಹಿರಾಡಂಬರದ ಬಡಿದಾಟಕ್ಕೆ ಸಿಕ್ಕಿರುವುದರಿಂದಲೇ ನಮಗಿನ್ನೂ ಸ್ವಾತಂತ್ರ್ಯ ದೇವತೆಯು ವಶವಾಗಿಲ್ಲ" ಎಂದರು. ಇದನ್ನು ಅರಿತುಕೊಂಡಂದಿನಿಂದ ಬಹಿರಾಡಂಬರದ ಬಟ್ಟೆಗಳನ್ನು ಕಿತ್ತೊಗೆದಿದ್ದಾರೆ. ಅವರ ಹಿಂದಿನ ಜೀವನದ ವೈಭವ, ಬೆಡಗುಗಳು ಎಲ್ಲೋ ಮಾಯವಾಗಿವೆ. ಸರಳತೆ ಬಂದಿದೆ. ಕಾಂಗ್ರೆಸ್ ಸೇರುವುದಕ್ಕೆ ಅನೇಕ ವರ್ಷಗಳ ಮುಂಚಿನಿಂದಲೂ ರೆಡ್ಡಿಯವರು ಖಾದೀಧಾರಿಗಳಾಗಿದ್ದಾರೆ.

ಯಾವ ವಿಷಯವನ್ನೇ ಆಗಲಿ ಸೂಕ್ಷ್ಮವಾಗಿ ಪರಿಶೀಲಿಸಿ ಆಳವಾಗಿ ವಿಂಗಡಿಸಿ ನೋಡುತ್ತಾರೆ. ವೇದಿಕೆಯಮೇಲೆ ನಿಂತರೆ ಗಂಟೆಗಟ್ಟಲೆ ಭಾಷಣ ಮಾಡಬಲ್ಲರು. ಇವರ ಭಾಷಣದಲ್ಲಿ ಜಲಪಾತದ ರಭಸವೇನೂ ಇಲ್ಲ. ನಿಧಾನವಾಗಿ ವಿಂಗಡಿಸಿ ವಿರಳವಾಗಿ ಮಾತನಾಡುತ್ತಾರೆ. ಪ್ರೇಕ್ಷಕರನ್ನು ಆಕರ್ಷಿಸುವ ಶಕ್ತಿ, ಸಾಮರ್ಥ್ಯಗಳು ಇವರ ಭಾಷಣದಲ್ಲಿ ಸ್ಪಷ್ಟವಾಗಿ ಕಂಡುಬರುತ್ತವೆ. ರೆಡ್ಡಿಯವರಿಗೆ ಓದುವ ಚಟ ಹೆಚ್ಚು. ವಿರಾಮ ಸಿಕ್ಕಿದರೆ ಸಾಕು ಪುಸ್ತಕವು ಕೈಗೆ ಬರುತ್ತದೆ. ಅದಕ್ಕಾಗಿ ಅವರ ಕೊಠಡಿಯ ದೀಪ ಅರ್ಧರಾತ್ರಿಯ ವರೆವಿಗೂ ಉರಿಯುತ್ತಿರುವುದುಂಟು.

**ಆಶ್ರಮವಾಸಿ**

ವಿದುರಾಶ್ವತ್ಥ ದುರಂತ ಪ್ರಕರಣ, ಕಾಂಗ್ರೆಸ್ ಅಧ್ಯಕ್ಷರ ಮತ್ತು ಕಾರ್ಯಕಾರಿ ಸಮಿತಿಯ ದಸ್ತಗಿರಿ, ಸತ್ಯಾಗ್ರಹ, ಸರ್ಕಾರದ ದಬ್ಬಾಳಿಕೆ, ಕಿರುಕುಳ ಮುಂತಾದುವುಗಳ ಗೊಂದಲಕ್ಕೆ ಸಿಕ್ಕಿ ಮೈಸೂರು ಒಮ್ಮೆ ಆಂದೋಲನದ ಹಗರಣವಾಗಿತ್ತು. ಆಗ ಮಹಾತ್ಮರಿಗೆ ಮೈಸೂರಿನ ರಾಜಕೀಯವನ್ನು ಚೆನ್ನಾಗಿ ಅರಿತುಕೊಳ್ಳಬೇಕೆಂಬ ಕತೂಹಲ ಬಂತು. ವಾರ್ಧದಲ್ಲಿಯೇ ಇದ್ದು ಮೈಸೂರಿನ ರಾಜಕೀಯ ನಡವಳಿಕೆಗಳನ್ನು ಪ್ರತಿನಿತ್ಯವೂ ತಮ್ಮ ಗಮನಕ್ಕೆ ತರಲು ದಕ್ಷರಾದ ಮುಖಂಡರೊಬ್ಬರನ್ನು ಕಳುಹಿಸಿಕೊಡಿ ಎಂದು ಇಲ್ಲಿಗೆ ಪತ್ರ ಬರೆದರು. ಆಗ ಯಾರನ್ನು ಕಳುಹಿಸಿದರೆ ಸರಿಯೆಂದು ಯೋಚಿಸಿ ಚಂಗಲರಾಯರೆಡ್ಡಿಯವರನ್ನೇ ಕಳುಹಿಸಲಾಯಿತು. ಅಲ್ಲಿದ್ದು ಮಹಾತ್ಮರಿಗೆ ಮೈಸೂರು ಕಾಂಗ್ರೆಸ್ಸಿನ ಮತ್ತು ಸರ್ಕಾರದ ನಡವಳಿಕೆಗಳನ್ನು ಪ್ರತಿದಿನವೂ ವರದಿ ಮಾಡುತ್ತಿದ್ದರು. ಅಂದಿನಿಂದಲೇ ಮಹಾತ್ಮರಿಗೆ ಮೈಸೂರು ಕಾಂಗ್ರೆಸ್ಸಿನಮೇಲೆ ಹೆಚ್ಚು ಹೆಚ್ಚು ಅಭಿಮಾನ ಹುಟ್ಟಲು ಆರಂಭವಾಯಿತು.

ಅಲ್ಲಿಗೆ ಹೋದಾಗ ರೆಡ್ಡಿಯವರಿಗೆ ವಾರ್ಧಾ ವಾತಾವರಣ ಹೊಂದಿಕೊಂಡಿತು. ಆಶ್ರಮಜೀವನವೂ ಅವರ ಮನಸ್ಸಿಗೆ ಅಂಟಿಕೊಂಡಿತು. ಎರಡು ತಿಂಗಳೊಳಗಾಗಿ ಅವರಲ್ಲಿ ಮಹತ್ತರ ಬದಲಾವಣೆಗಳು ಕಂಡುಬಂದವು. ಅವರ ಪ್ರಕೃತಿಯೇ ಅಂತಹುದು. ಎಲ್ಲವೂ ಅವರಿಗೆ ಹಿತವಾಗಿತ್ತು. ಮೈಸೂರಿಗೆ ಹಿಂತಿರುಗುವರೋ ಇಲ್ಲವೋ ಎಂಬ ಅನುಮಾನ ಅನೇಕರಿಗೆ ಬಂದಂತೆ ಅವರ ಪತ್ನಿಗೂ ಭಯ ಬಂತು. ಆದರೆ ಸನ್ನಿವೇಶಗಳ ಬದಲಾವಣೆಯಾಗಬೇಕಾಯ್ತು. ದಾಸಪ್ಪನವರ ದೇಹಾಲಸ್ಯ ವಾರ್ಧಾ ಯಾತ್ರೆಯನ್ನು ಕೈಕೊಳ್ಳುವಂತೆ ಮಾಡಿತು. ಅದರ ಪರಿಣಾಮವಾಗಿ ದಾಸಪ್ಪನವರು ವಾರ್ಧಾದಲ್ಲಿಯೇ ಉಳಿದುಕೊಂಡು ರೆಡ್ಡಿಯವರನ್ನು ಮೈಸೂರಿಗೆ ಕಳುಹಿಸಿದರು.

ರೆಡ್ಡಿಯವರು ರಾಜಕೀಯ ರಂಗದಲ್ಲಿದ್ದು, ಕೇವಲ ರಾಜಕಾರಣ ಪಟುಗಳಾಗಿದ್ದರೆಂದು ತಿಳಿಯಬಾರದು. ಮೈಸೂರು ಕಾಂಗ್ರೆಸ್ ರಚ

ನಾತ್ಮಕ ಕಾರ್ಯಕ್ರಮಗಳನ್ನು ಪ್ರಾರಂಭಿಸುವುದಕ್ಕೆ ಮುಂಚೆಯೇ ರಚನಾತ್ಮಕ ಕಾರ್ಯ ಕ್ರಮಗಳ ಕಡೆಗೆ ತಮ್ಮ ಗಮನವನ್ನು ಕೊಟ್ಟು ಕೋಲಾರ ಜಿಲ್ಲಾ ಬೋರ್ಡು, ಅಧ್ಯಕ್ಷರಾಗಿದ್ದ ವೇಳೆ ಕೋಲಾರ ಜಿಲ್ಲೆಯ ಹೊಸೂರು 'ಖಾದೀ ಕೇಂದ್ರ' ವನ್ನು ಸ್ಥಾಪಿಸಲು ಕಾರಣೀಭೂತರಾದರು. ೧೯೩೭ನೇ ಇಸವಿಯಲ್ಲಿ ಬೌರಿಂಗ್‌ಪೇಟೆಯಲ್ಲಿ 'ಹರಿಜನ ವಿದ್ಯಾರ್ಥಿ' ನಿಲಯವೊಂದನ್ನು ಸ್ಥಾಪಿಸಿ ಅಂದಿನಿಂದ ಇಂದಿನವರೆವಿಗೂ ಅದರ ಅಧ್ಯಕ್ಷರಾಗಿದ್ದಾರೆ. ಕೋಲಾರದಲ್ಲಿರುವ ನಿಮ್ನವರ್ಗದವರ ವಿದ್ಯಾರ್ಥಿ ನಿಲಯಕ್ಕೆ ಎರಡು ವರ್ಷಗಳು ಅಧ್ಯಕ್ಷರಾಗಿದ್ದರು ಮೈಸೂರು ಸಂಸ್ಥಾನದ ಹರಿಜನ ಸೇವಕ ಸಂಘದ ಕಾರ್ಯಕಾರಿ ಮಂಡಳಿಯ ಪ್ರಮುಖ ಸದಸ್ಯರಾಗಿ ಈಗಲೂ ಕೆಲಸ ಮಾಡುತ್ತಿದ್ದಾರೆ. ವಿದ್ಯಾರ್ಥಿದೆಸೆಯಲ್ಲಿದ್ದಾಗಲೇ ಕಾಂಗ್ರೆಸ್ ಮನೋಭಾವನೆ ಇವರ ಹೃದಯದಲ್ಲಿ ಮನೆ ಮಾಡಿಕೊಂಡಿತ್ತು. ಆದ್ದರಿಂದಲೇ ಅವರು ೧೯೩೦ನೇ ಇಸವಿಯಿಂದ ಅಖಿಲ ಭಾರತ ಕಾಂಗ್ರೆಸ್ಸಿನ ಸದಸ್ಯರಾಗಿದ್ದಾರೆ.

### ಅಧಿಕಾರಿಗಳಿಗೂ ಅಭಿಮಾನವಿದೆ

ರೈತರ ಮನೆತನದಲ್ಲಿ ಹುಟ್ಟಿದರೂ ವ್ಯವಸಾಯದ ಅನುಭವವಿಲ್ಲ. ಆದರೂ ನಾನೊಬ್ಬ ವ್ಯವಸಾಯಗಾರನೆನ್ನುತ್ತಾರೆ. ವಕೀಲ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ವಕೀಲ್ ವೃತ್ತಿಯನ್ನು ಒಂದು ವರ್ಷ ಕಲಿತರೂ ಸಹ ವಕೀಲರಾಗಿ ಯಾವ ಕೋರ್ಟಿನಲ್ಲೂ ಹೋಗಿ ನಿಂತಿಲ್ಲ. ವಾಣಿಜ್ಯ ವೃತ್ತಿಯ ಅನುಭವವಿಲ್ಲದಿದ್ದರೂ ವ್ಯಾಪಾರವನ್ನೂ ಸಹ ನಡೆಯಿಸಿದ್ದಾರೆ.

ಇವೆಲ್ಲಕ್ಕಿಂತಲೂ ಇವರ ಪ್ರತಿಭೆಯನ್ನು ಬೆಳಗಿಸಿದುದೆಂದರೆ ಪತ್ರಿಕೋದ್ಯಮ. ೧೯೩೭ನೆಯ ವರ್ಷದಲ್ಲಿ ಸುಮಾರು ೭ ತಿಂಗಳ ಕಾಲ, ಉಜ್ವಲ ರಾಷ್ಟ್ರೀಯ ದೈನಂದಿನ ಪತ್ರಿಕೆಯೆನಿಸಿಕೊಂಡಿದ್ದ "ಜನವಾಣಿ"ಯ ಸಂಪಾದಕರಾಗಿದ್ದರು. ಅಲ್ಪಕಾಲವಾದರೂ ಇವರು ಸಂಪಾದಕರಾಗಿದ್ದ ವೇಳೆ "ಜನವಾಣಿ"ಯು ಪ್ರಜೆಗಳ ಹಕ್ಕುಬಾಧ್ಯತೆಗಳಿಗೆ ಹೊಡೆದಾಡುವ ಪತ್ರಿಕೆಗಳ ಶ್ರೇಣಿಯಲ್ಲಿ ಪ್ರಥಮ ಸ್ಥಾನವನ್ನು ಪಡೆದಿತ್ತು. ಸರ್ಕಾರದ

ಅಧಿಕಾರಿಗಳಲ್ಲಿ ಕಂಡುಬರುತ್ತಿದ್ದ ಅಸಭ್ಯ, ಅನ್ಯಾಯ ವರ್ತನೆಗಳ ಬಗ್ಗೆ ನಿರ್ಭಯ ಟೀಕೆ ಮತ್ತು ಖಂಡನಾತ್ಮಕ ಲೇಖನಗಳನ್ನು ಆಗಾಗ್ಗೆ ಅದರಲ್ಲಿ ನಾವು ಕಾಣಬಹುದಾಗಿತ್ತು. ಸರ್ಕಾರದ ಉನ್ನತಾಧಿಕಾರಿಗಳು ಪ್ರತಿ ದಿನವೂ ಆಗ "ಜನವಾಣಿ"ಯನ್ನು ಓದದೇ ಮಲಗುತ್ತಿರಲಿಲ್ಲ.

ಸರ್ಕಾರದವರನ್ನು ತೀವ್ರವಾಗಿ ವಿರೋಧಿಸುತ್ತಿರುವ ಮೈಸೂರ್ ಕಾಂಗ್ರೆಸ್ಸಿನ ಮುಖ್ಯ ನಾಯಕರಾಗಿದ್ದರೂ ಸಹ ಸರ್ಕಾರದ ಅಧಿಕಾರಿಗಳಿಗೆ ರೆಡ್ಡಿಯವರ ಮಾತಿನ ಮೇಲೆ ಇರುವ ಅಭಿಮಾನ, ಅವರ ಮಾತಿಗೆ ಕೊಡುವ ಬೆಲೆ ಮತ್ತಿನ್ನಾರಿಗೂ ಕೊಡುತ್ತಿಲ್ಲವೆಂಬುದನ್ನು ನಾನು ಚೆನ್ನಾಗಿ ಬಲ್ಲೆ. ಒಮ್ಮೆ ಸರ್ಕಾರ ಪ್ರಮುಖ ಅಧಿಕಾರಿಗಳಲ್ಲಿ ನಾನು ಮಾತನಾಡುತ್ತಿರುವಾಗ್ಗೆ ಇವರ ಬಗ್ಗೆ ಈಗಲೂ ಅಧಿಕಾರಿವರ್ಗದವರು ಎಂತಹ ಮಟ್ಟದ ಗೌರವ ವಿಟ್ಟುಕೊಂಡಿರುವರೆಂಬುದನ್ನು ತಿಳಿದುಕೊಳ್ಳಲು ಅವಕಾಶವಾಯಿತು.

ಇದಕ್ಕೆ ಮತ್ತೊಂದು ನಿದರ್ಶನವನ್ನೂ ಸಹ ಕೊಡಬಹುದು. ಕೋಲಾರ ಜಿಲ್ಲೆಯ ಚುನಾವಣೆಗಳ ಕಾಲದಲ್ಲಿ ಕಾಂಗ್ರೆಸ್ ಸದಸ್ಯರು ಚುನಾವಣೆಗೆ ನಿಂತಕಡೆಗಳಲ್ಲೆಲ್ಲಾ ಸ್ವತಂತ್ರರನ್ನು ಪುಸಲಾಯಿಸಿ ಚುನಾವಣೆಗೆ ನಿಲ್ಲಿಸುತ್ತಿದ್ದ ಅಧಿಕಾರಿಗಳು ರೆಡ್ಡಿಯವರಿಗೆ ಎದುರಾಳಿಗಳನ್ನು ನಿಲ್ಲಿಸಲಿಲ್ಲ. ಹೀಗೇಕೆ ಮಾಡಿದರೆಂದು ಆ ಅಧಿಕಾರಿಗಳನ್ನು ಅವರ ಆಪ್ತ ಮಿತ್ರರೊಬ್ಬರು ಪ್ರಶ್ನಿಸಲಾಗಿ 'ರೆಡ್ಡಿಯವರು ಮಂತ್ರಿಯಾಗಲು ಬೇಕಾದ ಯೋಗ್ಯತೆ ಮತ್ತು ಘನತೆಯುಳ್ಳ ಮನುಷ್ಯರು; ಅಲ್ಲದೆ ಅವರ ನಿಸ್ವಾರ್ಥ ಸೇವೆ, ಜನೋಪಕಾರ ಬುದ್ಧಿ ನನ್ನ ಮನಸ್ಸನ್ನು ಮೆಚ್ಚಿಸಿವೆ. ಆದ್ದರಿಂದ ಅವರಿಗೆ ಎದುರಾಳಿಯನ್ನು ನಿಲ್ಲಿಸಬೇಕೆಂಬ ಇಚ್ಛೆಯೇ ನನಗೆ ಬರಲಿಲ್ಲ' ಎಂದರಂತೆ.

## ಕಾರಾಗೃಹವಾಸಗಳು

ರೆಡ್ಡಿಯವರು ಮೂರು ಬಾರಿ ಕಾರಾಗಾರವನ್ನು ಕಂಡಿದ್ದಾರೆ. ಶಿವಪುರದಲ್ಲಿ ನಡೆದ ಧ್ವಜ ಸತ್ಯಾಗ್ರಹ ಸಂಬಂಧದಲ್ಲಿ ಇವರನ್ನು ದಸ್ತಗಿರಿ ಮಾಡಿ ೩|| ತಿಂಗಳ ಶಿಕ್ಷೆಯನ್ನು ವಿಧಿಸಲಾಗಿತ್ತು. ಆದರೆ ೧|| ತಿಂಗಳ ಶಿಕ್ಷೆಯನ್ನು ಅನುಭವಿಸಿದ ನಂತರ ಬಿಡುಗಡೆ ಮಾಡಲಾಯಿತು. ಮತ್ತು

ಕೋಲಾರ ಚಿನ್ನದ ಗಣಿಯಲ್ಲಿ ದಸ್ತಗಿರಿಯಾಗಿ ೩ ತಿಂಗಳು ೩೦ ದಿವಸಗಳ ಕಠಿಣ ಶಿಕ್ಷೆಯನ್ನು ಅನುಭವಿಸಿ ಹೊರಗೆ ಬಂದರು. ತಿರುಗಿ ೧೯೪೨ನೆಯ ಆಗಸ್ಟ್ ತಿಂಗಳಲ್ಲಿ ಹೊಡೆದ ಬಿರುಗಾಳಿಯಲ್ಲಿ ಸಿಕ್ಕಿ ೧೬ ತಿಂಗಳು ಕಾಲ ಸ್ಥಾನಬದ್ಧತೆಯಲ್ಲಿದ್ದರು.

ಆಗ ಅವರಿಗೆ ಉಂಟಾದ ಕಿವಿಯ ನೋವು ಇವರ ಶರೀರವನ್ನು ಕೃಶ ಗೊಳಿಸಿತು. ಜೈಲಿನಲ್ಲಿಟ್ಟಿದ್ದ ಸರ್ಕಾರ ಇವರಿಗೆ ತಕ್ಕ ಚಿಕಿತ್ಸೆ ಕೊಡಲಿಲ್ಲ. ಇವರೇ ಚಿಕಿತ್ಸೆ ಪಡೆಯಲು ಅನುಕೂಲವಾಗುವಂತೆ ಇವರನ್ನು 'ಪೆರೋಲ್' ಮೇಲೂ ಬಿಡಲಿಲ್ಲ. ಕಿವಿಯ ಬಾಧೆ ಹೆಚ್ಚಾಯಿತು. ಉತ್ಕಟಾವಸ್ಥೆಗೆ ಬಂತು. ಚಿಕಿತ್ಸೆಗೆ ವೇಳೆ ಮೀರಿತೆಂದು ವೈದ್ಯರು ಹೇಳಿದರು. ರೆಡ್ಡಿಯ ವರಿಗೆ ಸಹನೆಯ ಮೇರೆ ಮೀರಿತು. ಸರ್ಕಾರದ ಮೇಲೆ ದಾವಾ ಹೂಡಲು ಸಿದ್ಧರಾದರು. ತಪ್ಪನ್ನು ಅರಿತುಕೊಂಡು ಸರ್ಕಾರ ಚಿಕಿತ್ಸೆಗೆ ಅನುಕೂಲ ವಾಗುವಂತೆ ಇವರನ್ನು 'ಪೆರೋಲ್' ಮೇಲೆ ಬಿಟ್ಟಿತು. ಆದರೆ ವೇಳೆ ಮೀರಿತ್ತಾದುದರಿಂದ ಸಂಪೂರ್ಣ ಗುಣವಾಗಲಿಲ್ಲ. ಒಂದು ಕಡೆಯ ಕಿವಿ ಈಗಲೂ ಕೊಂಚ ಅಸ್ವಸ್ಥವಾಗಿದೆ. ಸರ್ಕಾರದ ಕಪಿಮುಷ್ಟಿಯು ರೆಡ್ಡಿ ಯವರನ್ನು ಕೊಂಚ ಕಿವುಡರನ್ನಾಗಿ ಮಾಡಿದೆ. ಅದನ್ನು ಅವರು ತಾಳ್ಮೆ ಯಿಂದ ಸಹಿಸಿಕೊಂಡಿದಾರೆ.

ರಾಜಕೀಯದಲ್ಲಿ ರೆಡ್ಡಿಯವರಿಗೆ ಇರುವ ಅನುಭವ ಕಂಡು ಪ್ರಜಾ ಪ್ರತಿನಿಧಿ ಸಭಾ ಕಾಂಗ್ರೆಸ್ ಪಕ್ಷದ ಇವರನ್ನು ತಮ್ಮ ಪಕ್ಷದ ನಾಯಕರ ನ್ನಾಗಿ ಚುನಾಯಿಸಿಕೊಂಡಿತ್ತು. ಮತ್ತೆ ನ್ಯಾಯವಿಧಾಯಕ ಸಭೆಯಲ್ಲಿ ಕಾಂಗ್ರೆಸ್ ಪಕ್ಷ ಇವರನ್ನೇ ನಾಯಕರನ್ನಾಗಿ ಮಾಡಿಕೊಂಡಿದೆ. ಎಂದು ರಾಜಕೀಯ ಪಕ್ಷವನ್ನು ಕಠಿಣ ಹೃದಯದ ಸರ್ಕಾರದ ಮುಂದೆ ಹೇಗೆ ನಡೆಸಿಕೊಂಡು ಹೋಗಬೇಕೆಂಬುದನ್ನೇ ರೆಡ್ಡಿಯವರು ಚೆನ್ನಾಗಿ ಅರಿತು ಕೊಂಡಿದ್ದಾರೆ. ಅದು ಪ್ರತಿನಿಧಿ ಸಭೆಗಳಲ್ಲಿ ಅವರು ಅರಿತು-ನುರಿತುದರ ಫಲ. ಅವರು ದುಡಿತಕ್ಕೆ ತಕ್ಕ ಪ್ರತಿಫಲ ಇಲ್ಲದೆ ಇಲ್ಲ. ಅದನ್ನು ದೇಶವೇ ಎದುರು ನೋಡುತ್ತಿದೆ.



ಕೆ. ಪಟ್ಟಾಭಿರಾಮ್



ಕೆ. ಪಟ್ಟಾಭಿರಾಮ್

# ಕೆ. ಪಟ್ಟಾಭಿರಾಮನ್

೧೯೩೮ನೆಯ ವರ್ಷ ಫೆಬ್ರವರಿ ತಿಂಗಳಲ್ಲಿ ಮಲ್ಲೇಶ್ವರದ ರಾಮ ಮಂದಿರದಲ್ಲಿ ಅಖಿಲ ಮೈಸೂರ್ ಕಾಂಗ್ರೆಸ್ಸ್ ಸಮಿತಿಯ ಸಭೆ ಸೇರಿತ್ತು. ಅದು ಅಂದಿನವರೆವಿಗೂ ಸೇರಿದ ಸಭೆಗಳಲ್ಲೆಲ್ಲಾ ಬಹು ಮುಖ್ಯವಾದುದು. ಅಲ್ಲಿ ಸ್ವಾರ್ಥಸಾಧಕ ಜಳ್ಳುಗಳನ್ನು ತೂರಿಬಿಡುವ ಒಂದು ನಿರ್ಣಯ ಸಭೆಯ ಮುಂದೆ ಬಂದಿತ್ತು. ಸಭೆಯು ಇತ್ತಂಡವಾಗಿ ನಿರ್ಣಯದ ಪರವಾಗಿ ಕೆಲವರು, ವಿರೋಧ ಪರವಾಗಿ ಕೆಲವರು ಕಿತ್ತಾಡಲು ಆರಂಭಿಸಿದರು. ವಿರೋಧ ಪಕ್ಷ ಬಲವಾಗಿತ್ತು. ವಾಗ್ವಾದ, ಪ್ರತಿಭಟನೆ, ತಿಕ್ಕಾಟ ಜೋರಾಗಿ ನಡೆದಿತ್ತು.

**ಬೆಳಕೆಗೆ ಬಂದುದು**

ಸರ್ಕಾರದ ದಬ್ಬಾಳಿಕೆಯನ್ನು ಖಂಡಿಸುವ ಮತ್ತು ಪ್ರತಿಭಟಿಸುವ ಸಲುವಾಗಿ ಶಾಸನ ಸಭೆಗಳಲ್ಲಿರುವ ಕಾಂಗ್ರೆಸ್ ಸದಸ್ಯರೆಲ್ಲಾ ತಮ್ಮ ತಮ್ಮ ಸ್ಥಳಕ್ಕೆ 'ರಾಜೀನಾಮೆ' ಕೊಡಬೇಕೆಂಬುದೇ ಅಂದಿನ ದಿನದ ನಿರ್ಣಯವಾಗಿತ್ತು. ಕಾರ್ಯಸಮಿತಿಯನ್ನುಳಿದು, ಅಖಿಲ ಮೈಸೂರ್ ಕಾಂಗ್ರೆಸ್ ಸಮಿತಿಯ ಸದಸ್ಯರೆಲ್ಲರೂ ನಿರ್ಣಯವನ್ನು ವಿರೋಧಿಸತೊಡಗಿದರು. ದಿನವೆಲ್ಲಾ ಚರ್ಚೆ ನಡೆಯಿತು. ಸಫಲವಾಗಲಿಲ್ಲ. ಕಾರ್ಯಕಾರಿ ಸಮಿತಿಯು ಸಭೆಯ ಮುಂದಿಟ್ಟ ನಿರ್ಣಯ ಬಿದ್ದುಹೋಗುವಂತಾಯಿತು. ಆಗ ಸಭೆಯ ವೇದಿಕೆಯ ಮೇಲೆ ನಿಂತು ನಿರ್ಣಯದ ಪರವಾಗಿ, ಒಂದೇ ನಿಟ್ಟಿನಲ್ಲಿ, ಒಂದೇ ಉಸಿರಿನಲ್ಲಿ ವ್ಯಕ್ತಿಯೊಂದು ದೀರ್ಘವಾಗಿ ಭಾಷಣ ಮಾಡಿತು. ನಿರ್ಣಯದ ಉದ್ದಿಶ್ಯ, ಅವಶ್ಯಕತೆಗಳನ್ನು ವಿವರವಾಗಿ,; ವಿರಳವಾಗಿ ಸಭಿಕರ ಮನಮುಟ್ಟುವಂತೆ ತಿಳಿಸಿದರು. ಅವರೇ ಕೋಲಾರದ ಕೆ. ಪಟ್ಟಾಭಿರಾಮನ್‌ರವರು.

ಆ ವೇಳೆಗೆ ಪಟ್ಟಾಭಿರಾಮನ್‌ರವರನ್ನು ಅರಿತಿದ್ದವರು ಬಹಳ ಮಂದಿ ಇರಲಿಲ್ಲ. ಕಾರ್ಯಸಮಿತಿಯ ಸದಸ್ಯರನೇಕರಿಗೆ ಇವರ ಸಂಪೂರ್ಣ

ಪರಿಚಯವಿರಲಿಲ್ಲ. ಅಂದಿನ ಇವರ ವಾಕ್ಸರಣಿ, ವಾಕ್ಚಾತುರಿಯನ್ನು ಯಾರೂ ಮರೆಯುವಂತಿಲ್ಲ. ವಿರೋಧ ಪಕ್ಷದವರೆಲ್ಲಾ ತಲೆದೂಗಿದರು. ಅವರುಗಳ ಪ್ರತಿಭಟನೆಯೆಲ್ಲಾ ಇವರ ಉತ್ತರದ ತಣ್ಣೀರಿನಿಂದ ತಣ್ಣಗಾಯಿತು. 'ಆಗುವುದಿಲ್ಲ'ವೆಂಬ ಆರ್ಭಟಗಳು ನಿಂತುಹೋದವು. ಅಂದು ಪಟ್ಟಾಭಿರಾಮನ್‌ರವರ ಪ್ರತಿಭೆ ಬೆಳಕಿಗೆ ಬಂತು. ಗೊತ್ತಿಲ್ಲದವರೆಲ್ಲಾ ಇವರ್ಯಾರೆಂದು ವಿಚಾರಿಸಲು ಆರಂಭಿಸಿದರು- ಪರಿಚಯ ಮಾತ್ರ ಮಾಡಿಕೊಂಡಿದ್ದವರು ಇವರ ವಿಷಯಗಳನ್ನೆಲ್ಲಾ ಚೆನ್ನಾಗಿ ಅರಿತುಕೊಳ್ಳಲು ಅನುವಾದರು.

## ಅವರ ವ್ಯಕ್ತಿತ್ವ

ಪಟ್ಟಾಭಿರಾಮನ್ ನೋಡಲು ಮನಸೆಳೆಯುವ ಮಹಾವ್ಯಕ್ತಿಯಲ್ಲ. ಆದರೂ ಅವರ ಮುಖ ಸೌಮ್ಯದ ಸೊಬಗನ್ನು ಬೀರುತ್ತಿರುತ್ತದೆ. ಆಳು ಮೋಟಾದರೂ ಸ್ಥೂಲಕಾಯರಲ್ಲ – ಪ್ರಸನ್ನವದನ. ವಿಶ್ವಾಸ ತುಂಬಿದ ಕಣ್ಣುಗಳು. ವಾತ್ಸಲ್ಯ ತುಂಬಿದ ಹೃದಯ. ಗಂಭೀರ ಸ್ವಭಾವ.

ರಾಮನ್ ಒಳ್ಳೇ ಮೇಧಾವಿಗಳು. ಸುಸಂಸ್ಕೃತರು, ನಿರಹಂಕಾರಿಗಳು. ಒದಗಿರುವ ಒಗಟೆಗಳನ್ನು ಬಾಳೆಯಹಣ್ಣು ಸುಲಿದಂತೆ ಬಹು ಸುಲಭವಾಗಿ ಬಿಡಿಸಬಲ್ಲರು. ಇವರ ಬುದ್ಧಿ ಅತಿ ಸೂಕ್ಷ್ಮ. ರಾಜಕೀಯ ರಂಗಕ್ಕೆ ಹೊಸಬರಾದರೂ ಯಾವ ಹಳೆಯ ಹುಲಿಗೂ ಕಡಿಮೆಯಿಲ್ಲ. ಅನುಭವಿಗಳಿಗಿಂತ ಮಿಗಿಲಾದ ಕೈ ಚಳಕ. ಅದರಲ್ಲಿ ಅನುಮಾನವಿಲ್ಲ. ಅದ್ವಿತೀಯ ವಾದಚತುರರಾದ ರಾಮನ್‌ರವರು ಅಪಾರ ವರಮಾನವಿದ್ದ ವಕೀಲಿ ವೃತ್ತಿಯನ್ನು ಕಳೆದುಕೊಂಡು ಈಗ ನಿರಾಡಂಬರ ಜೀವನ ನಡೆಯಿಸುತ್ತಾ, ದೀನ ಜನ ಸೇವೆಯನ್ನೇ ತಮ್ಮ ಬದುಕಿನಲ್ಲಿ ಅನುಷ್ಠಾನಕ್ಕೆ ತಂದಿದ್ದಾರೆ. ಅದಕ್ಕೆ ಸೇವೆಯ ಸಂಕಲ್ಪವೇ ಕಾರಣ.

ರಾಮನ್ ಬೂದಿ ಮುಚ್ಚಿದ ಕೆಂಡದಂತಹ ವ್ಯಕ್ತಿ. ಮೇಲಿರುವ ಮುಸುಕನ್ನು ತೆಗೆದು ಹೊರಗೆ ಬರಬೇಕೆಂಬ ಆಕಾಂಕ್ಷೆ ಅವರಿಗಿರಲಿಲ್ಲವೆಂದು ಕಾಣುತ್ತದೆ. ಆದ್ದರಿಂದಲೇ ಇವರು ತಮ್ಮ ಊರುಬಿಟ್ಟು ಹೊರಹೊರಟವ

ರಲ್ಲ. ಮೈಸೂರು ಕಾಂಗ್ರೆಸ್ಸಿನ ಪ್ರಧಾನ ಕಾರ್ಯದರ್ಶಿಗಳಾಗಿ ಎರಡು ವರ್ಷಗಳಕಾಲ ಒಂದೇ ಸಮನಾಗಿ ಕೆಲಸಮಾಡಿದ ಇವರನ್ನು ಆ ಸ್ಥಾನಕ್ಕೆ ಬರುವ ಮೊದಲು ಜನತೆ ತಿಳಿದಿರಲಿಲ್ಲ. ಇವರ ಶಕ್ತಿ, ಸಾಮರ್ಥ್ಯಗಳನ್ನು ಅರಿತಿರಲಿಲ್ಲ. ಎಲ್ಲೋ ಒಂದು ಮೂಲೆಯಲ್ಲಿದ್ದ ಇವರು ಒಂದೆರಡು ವರ್ಷಗಳಲ್ಲಿಯೇ ಮೈಸೂರು ಕಾಂಗ್ರೆಸ್ಸಿನ ಮುಂದಾಳುಗಳ ಶ್ರೇಣಿಯಲ್ಲಿ ಸೇರಿ, ಇಂದು ಪ್ರಚಂಡ ರಾಜಕೀಯ ಧುರೀಣರಾಗಿದ್ದಾರೆ. ಅಂತಹ ಅಪ್ರತ್ಯಕ್ಷ ಪ್ರತಿಭೆ, ಅಪೂರ್ವ ವ್ಯಕ್ತಿತ್ವ, ರಾಜಕೀಯ ಪ್ರಜ್ಞೆ ಇವರಲ್ಲಿ ಅಡಕವಾಗಿವೆ.

**ಬಾಲ್ಯ ಮತ್ತು ವಿದ್ಯಾಭ್ಯಾಸ**

ಪಟ್ಟಾಭಿರಾಮನ್‌ರವರು ಹುಟ್ಟಿದುದು ಕೋಲಾರದ ಬಣಜಿಗ ಕೋಮಿನ ಬಡತನದ ಸಂಸಾರದಲ್ಲಿ. ಹುಟ್ಟಿದ ಕೆಲವು ವರ್ಷಗಳಲ್ಲೇ ತಂದೆ ತಾಯಿಗಳನ್ನು ಕಳೆದುಕೊಂಡು ತಬ್ಬಲಿಯಾದರು. ಮೊದಲೇ ಬಡತನದ ಮನೆತನ; ಜೊತೆಗೆ ತಬ್ಬಲಿತನ; ಇವೆರಡರ ಮಧ್ಯೆ ಸಿಕ್ಕಿ ಬೆಂದ ಪಟ್ಟಾಭಿಯವರು ಇಂದು ಬಡತನದ ಬೇಗೆಯನ್ನು ಚೆನ್ನಾಗಿ ವರ್ಣಿಸಬಲ್ಲವರಾಗಿದ್ದಾರೆ. ಬಾಲ್ಯದಲ್ಲಿ ಇವರು ಅನುಭವಿಸಿದ ಕಷ್ಟದ ಫಲವಾಗಿ ಅವರ ಜೀವ ಮಾಗಿ ಮೆದುವಾಗಿದೆ. ಅದು ಅವರ ಇಂದಿನ ಜೀವನದಲ್ಲೂ ಸ್ಪಷ್ಟವಾಗಿ ಎದ್ದು ಕಾಣುತ್ತಿದೆಯೆಂದರೆ ತಪ್ಪಲ್ಲ.

ಹುಟ್ಟಿದುದು ಕೋಲಾರವಾದರೂ ಬಾಲ್ಯದ ಬೆಳವಣಿಗೆಯೆಲ್ಲಾ ಬೆಂಗಳೂರಲ್ಲೇ ನಡೆಯಿತು. ಗಿಡದ ಬೆಳವಣಿಗೆ ಮೊಳಕೆಯಲ್ಲೇ ಗೊತ್ತಾಗುವಂತೆ ಪಟ್ಟಾಭಿರಾಮನ್‌ರವರ ಮುಂದಿನ ರಾಜಕೀಯ ಧುರೀಣತೆ ಬಾಲ್ಯದಲ್ಲೇ ಕಾಣಲು ಆರಂಭಿಸಿತು. ಹೈಸ್ಕೂಲಿನಲ್ಲಿ ಓದುತ್ತಿದ್ದಾಗಲೇ ಇವರಿಗೆ ರಾಜಕೀಯವನ್ನು ಅರಿತುಕೊಳ್ಳುವ ಆಶೆ ಅಂಕುರಿಸಿತು. ಸಾಮಾಜಿಕ, ಧಾರ್ಮಿಕ ಚರ್ಚೆಗಳೆಂದರೆ ಅಭಿಲಾಷೆ ಹೆಚ್ಚಿತು. ಆದ್ದರಿಂದಲೇ ಅವಕ್ಕೆ ಸಂಬಂಧಿಸಿದ ಎಲ್ಲಾ ಚರ್ಚಾಕೂಟಗಳಲ್ಲೂ, ಸಂಸ್ಥೆಗಳಲ್ಲೂ ಸಂಚಾಲಕರಾಗಿ ಕೆಲಸ ಮಾಡುತ್ತಿದ್ದರು. ೧೯೩೧ ರಿಂದ ೧೯೩೬ ರ ವರೆವಿಗೂ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ವಿಚಾರಗಳ ಬಗ್ಗೆ ಇಂಗ್ಲೀಷಿನಲ್ಲಿ ಹಲವಾರು ಚಿಕ್ಕ ಪುಟ್ಟ ಪ್ರಕಟಣೆಗಳನ್ನು **ತಾವೇ** ಅಚ್ಚು

ಹಾಕಿಸಿ ಹೊರಗೆಡವಿದ್ದಾರೆ. ಇವುಗಳಲ್ಲದೆ ಅನೇಕ ಪತ್ರಿಕೆಗಳಿಗೆ ಹಲವಾರು ವಿಚಾರಗಳ ಹಲವಾರು ಲೇಖನಗಳನ್ನು ಬರೆದು ಕಳುಹಿಸಿದ್ದಾರೆ, ಸಂಪಾದಕರುಗಳು ಆ ಲೇಖನಗಳನ್ನು ಮೆಚ್ಚಿ ಜನತೆಯ ಮುಂದೆ ಇರಿಸಿದ ನಿದರ್ಶನಗಳು ಅನೇಕವಿವೆ.

## ಉಪಾಧ್ಯಾಯ ವೃತ್ತಿ ಮತ್ತು ಪತ್ರಿಕೋದ್ಯಮ

೧೯೨೩ರಲ್ಲಿ ಎಂಟ್ರೆನ್ಸ್ ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ಮೈಸೂರಿನ ಮಹಾರಾಜ ಕಾಲೇಜಿಗೆ ಸೇರಿದರು. ಅಲ್ಲಿ ವೇದಾಂತ ಮತು ಆರೋಗ್ಯ ಶಾಸ್ತ್ರಗಳ ಪರೀಕ್ಷೆಯಲ್ಲಿ ಬಹುಮಾನಪಡೆದುದಲ್ಲದೆ, ಮೈಸೂರು ವಿಶ್ವವಿದ್ಯಾನಿಲಯ ಸಂಘದ ಉಪಾಧ್ಯಕ್ಷರಾಗಿ ಚುನಾಯಿಸಲ್ಪಟ್ಟರು. ೧೯೨೬ನೆಯ ಪದವೀಧರರಾದರು. ಅದೇ ವರ್ಷ ಭದ್ರಾವತಿಯಲ್ಲಿ ಏಳು ತಿಂಗಳು ಕಾಲ ಮಾಧ್ಯಮಿಕ ಶಾಲೆಯ ಉಪಾಧ್ಯಾಯರಾಗಿ ಕೆಲಸ ಮಾಡಿದರು. ಇವರ ಮನೋವೃತ್ತಿಗೆ ಉಪಾಧ್ಯಾಯ ವೃತ್ತಿ ಸರಿಬೀಳಲಿಲ್ಲ. ಓದಬೇಕೆಂದು ಮನಸ್ಸು ಹೇಳುತ್ತಿತ್ತು. ಆದ್ದರಿಂದ ಆ ವೃತ್ತಿಗೆ ರಾಜೀನಾಮೆ ಇತ್ತು ಮದರಾಸ್ ಲಾ ಕಾಲೇಜಿಗೆ ಸೇರಿ ೧೯೨೯ರಲ್ಲಿ ಲಾ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಬಿ.ಎಲ್. ಪರೀಕ್ಷೆಯನ್ನು ಮಾಡಿದ ಮರುವರುಷವೇ ಕೋಲಾರದಲ್ಲಿ ವಕೀಲಿ ವೃತ್ತಿಯನ್ನು ಆರಂಭಿಸಿದರು. ವಾದಚತುರರಾದುವರಿಂದಲೂ ಜನಾನುರಾಗಿಗಳಾದುದರಿಂದಲೂ ವೃತ್ತಿಯು ಚೆನ್ನಾಗಿ ನಡೆಯುತ್ತಿತ್ತು. ವಕೀಲಿ ವೃತ್ತಿಯನ್ನು ಕೈಕೊಳ್ಳುವ ಮುನ್ನ ಉಪಾಧ್ಯಾಯ ವೃತ್ತಿಯನ್ನು ಕೈಕೊಂಡಂತೆ ವೃತ್ತ ಪತ್ರಿಕೋದ್ಯಮವನ್ನು ಕೈಕೊಂಡಿದ್ದರು. ಶ್ರೀಮಾನ್ ಹೆಚ್. ಕೆ. ವೀರಣ್ಣ ಗೌಡರ ಸಂಪಾದಕತ್ವದಲ್ಲಿ ಹೊರಡುತ್ತಿದ್ದ 'ಚಿತ್ರಗುಪ್ತ' ಪತ್ರಿಕೆಯ ಉಪಸಂಪಾದಕರಾಗಿ ಕೆಲಸ ಮಾಡುತ್ತಿದ್ದುದಲ್ಲದೆ, ಬೇರೆ ಪತ್ರಿಕೆಗಳಿಗೂ ಲೇಖನಗಳನ್ನು ಬರೆಯುತ್ತಿದ್ದರು. ಪತ್ರಿಕೋದ್ಯಮದ ಅನುಭವವಿರುವಂತೆ ಪತ್ರಿಕೋದ್ಯಮಿಯಾಗಬೇಕೆಂಬ ಆಸೆ ಈಗಲೂ ರಾಮನ್‌ರವರಲ್ಲಿ ನೆಲಸಿನಿಂತಿದೆ.

**ಇರುವ ಅಪವಾದ**

ವಿವಿಧ ವೃತ್ತಿಗಳ ಅನುಭವವಿದ್ದರೂ, ಮಾಡುವ ಮನಸ್ಸಿದ್ದರೂ, ರಾಜಕೀಯಕ್ಕೆ ಕಾಲಿಟ್ಟವರು ಅವುಗಳನ್ನು ನೆನೆಯುವಂತಿಲ್ಲ. ರಾಜಕೀಯ ರಂಗವೇ ಅಷ್ಟು. ಸಾಹಿತ್ಯದಂತಹ ರಸಮಯ ಕಲೆಯನ್ನೂ ಸಹ ಒತ್ತಟ್ಟಿಗೆ ತಳ್ಳಿ ರಾಷ್ಟ್ರೀಯತ್ವದ ಮಹಾಸಾಗರದಲ್ಲಿ ಮುಳುಗಿಸಿಬಿಡುತ್ತದೆ. ಅಂತಹುದರಲ್ಲಿ ಪತ್ರಿಕೋದ್ಯಮ ಪಟ್ಟಾಭಿರಾಮನ್‌ರವರನ್ನು ಹಿಡಿದು ಕೂಡಿಸಲು ಸಾಧ್ಯವಾದೀತೇ ?

ಪಟ್ಟಾಭಿರಾಮನ್ ಬಹು ಸರಳಿ. ಆದರೂ ಜನರೊಡನೆ ಅಷ್ಟು ಸಲಿಗೆಯಿಂದ ಮಿಳಿತವಾಗುವ ಸ್ವಭಾವವಿಲ್ಲ. ಬೆರೆತು ಸಖ್ಯ ಬೆಳೆಯಿಸಬೇಕೆಂಬ ಆಸೆಯೂ ಇಲ್ಲ. ಅದು ಅವರ ಗುಣ. ಪ್ರಧಾನ ಕಾರ್ಯದರ್ಶಿ ಪಟ್ಟ ಬಂದಮೇಲೆ, ಆ ಅಧಿಕಾರ ಅವಧಿಯಲ್ಲಿ ಸಂಸ್ಥಾನವನ್ನೆಲ್ಲಾ ಸುತ್ತಿದ್ದಾರೆ. ಸಾವಿರಾರು ಜನರನ್ನು ಕಂಡಿದ್ದಾರೆ. ಪರಿಚಯಮಾಡಿಕೊಂಡಿದ್ದಾರೆ. ಆದರೆ ಅವರಲ್ಲಿ ಎಷ್ಟುಜನ ಸಲಿಗೆಯ ಗೆಳೆಯರಿದ್ದಾರೆಂಬುದನ್ನು ಅವರನ್ನೇ ಕೇಳಿನೋಡಿ. ಹೆಚ್ಚು ಜನರಿಲ್ಲ. ಕಾರ್ಯದಲ್ಲಿಯೂ ಅಷ್ಟೆ. ಹೊಂದಿಕೊಂಡು ಕೆಲಸಮಾಡುವ ಮತ್ತು ಮಾಡಿಸಿಕೊಳ್ಳುವ ಚತುರತೆಯೂ ಕಡಿಮೆ. ಆದ್ದರಿಂದಲೇ ಅವರ ಕೈಕೆಳಗೆ ಕೆಲಸಮಾಡುತ್ತಿದ್ದವರೆಲ್ಲರೂ ಸಾಕುಸಾಕಾಗಿ ಹೋಗುತ್ತಿದ್ದರು.

**ಸುಪ್ರಸಿದ್ಧ ಭಾಷಣಕಾರ**

ಇತರರೊಡನೆ ಇವರು ಸಖ್ಯ ಬೆಳೆಯಿಸುವುದು ಕಡಿಮೆಯಾದರೂ, ಬೆಳೆಯಿಸಿದವರೊಡನ ಬಲು ಸಲಿಗೆ. ಇವರೊಡನೆ ಕುಳಿತು ಮಾತನಾಡುವುದೆಂದರೆ ಬಲು ಸೊಗಸು, ಬಹು ಆನಂದ; ಸಂಭಾಷಣೆ ಸ್ವಾರಸ್ಯವಾಗಿರುತ್ತದೆ. ಪ್ರತಿ ಮಾತೂ ಜೇನುಸವಿದಂತೆ. ಅಣ್ಣನಂತೆ ಕರುಳುಗೊಂಡು ಪ್ರೀತಿಯಿಂದ ಮಾತನಾಡುತ್ತಾರೆ. ರಾಮನ್ ಅರಿಯದ ವಿಚಾರವಿಲ್ಲ, ತಿಳಿಯದ ವಿಷಯವಿಲ್ಲ. ಎಲ್ಲದರ ಬಗ್ಗೆಯೂ ಚರ್ಚೆ ಮಾಡಬಲ್ಲರು. ವಾದದಲ್ಲಂತೂ ಸಿಡಿಲುಮರಿ. ಎದುರುಪಕ್ಷದವರು ಇವರ ವಾದ ಕೇಳಿ

ಡಂಗಾಗಿ ಕುಳಿತುಕೊಳ್ಳುವರು. ತರ್ಕಕ್ಕೆ ಕುಳಿತರೂ ಅಷ್ಟೆ. ಕೇಳುತ್ತಿರು ವವರನ್ನು ಬೆಪ್ಪು ಹಿಡಿಸುವ ಶಕ್ತಿ, ಬೆರಗುಗೊಳಿಸುವ ಸಾಮರ್ಥ್ಯ.

ಭಾಷಣ ಮಾಡಲು ನಿಂತರಂತೂ ಸಭಿಕರ ಮನ ಸೆಳೆಯುವಂತೆ ಧಾರಾಳವಾಗಿ ಮಾತನಾಡಬಲ್ಲರು. ಮಾತು ಕೊಂಚ ಬಿರುಸಾಗಿ ಹರಿ ದರೂ ಸ್ಪಷ್ಟವಾಗಿ, ಸರಳವಾಗಿರುತ್ತದೆ. ಅಷ್ಟೇ ಮಿತವಾಗಿಯೂ ಹಿತವಾ ಗಿಯೂ ಇರುತ್ತದೆ. ಅವರ ಶಬ್ದಸಂಗ್ರಹ ಅಷ್ಟೊಂದು ಹಿರಿದಾದುದು. ಮಾತುಗಳು ಅಷ್ಟೊಂದು ಆಕರ್ಷಕವಾದುವುಗಳು. ಪಟ್ಟಾಭಿರಾಮನ್ ರವರ ಭಾಷಣ ಕೇಳಿದವರಾರೂ ಅವರ ಭಾಷಣದ ಬಗ್ಗೆ ಮೆಚ್ಚುಗೆಯ ಮಾತನಾಡದೆ ಮುಂದುವರಿಯುವುದಿಲ್ಲ. ಸುಪ್ರಸಿದ್ಧ ಭಾಷಣಕಾರ ಪಂಕ್ತಿ ಯಲ್ಲಿ ರಾಮನ್ ತಮ್ಮ ಸ್ಥಾನ ಗಳಿಸಿಕೊಂಡಿದ್ದಾರೆ.

ರಾಮನ್‌ರವರು ಒಮ್ಮೆ ಕೊಚ್ಚಿನ್ ಮತ್ತು ಮಿರಜ್ ಸಂಸ್ಥಾನಗಳಲ್ಲಿ ಸಂಚಾರಮಾಡಬೇಕಾಗಿ ಬಂತು. ಅಲ್ಲಿನ ಪ್ರಜಾ ಮಂಡಲಿಗಳ ಆಸರೆಯಲ್ಲಿ ಭಾಷಣೆಗಳು ನಡೆದವು. ಭಾಷ್ಯಂ ಮತ್ತು ರಾಮನ್ ಇಬ್ಬರೂ ಹೋಗಿ ದ್ದರು. ರಾಮನ್‌ರವರ ಭಾಷಣ ಕೇಳಿ ಜನ ಮೂಗಿನಮೇಲೆ ಬೆರಳಿಟ್ಟು ಕೊಂಡರಂತೆ. ಅಷ್ಟೊಂದು ಸ್ಫೂರ್ತಿಯುತವಾಗಿ ಮಾತನಾಡಬಲ್ಲರು, ರಾಮನ್‌ರವರು.

**ಸಲ್ಲಿಸಿರುವ ಸೇವೆ**

ಸುತ್ತಿನ ಜಗತ್ತನ್ನು ನೋಡದೆ ಜಟಕಾಕ್ಕೆ ಕಟ್ಟಿದ ಕಣ್ಣುಮುಚ್ಚಿದ ಕುದುರೆಯಂತೆ ರಾಮನ್ ತಮ್ಮ ವೃತ್ತಿಯನ್ನು ಮಾಡಿಕೊಂಡು ತಮ್ಮ ಸಂಸಾರ ನೂಕಿಕೊಂಡು ಹೋಗುವ ಗುಂಪಿಗೆ ಸೇರಿದವರಲ್ಲ. ಸಾರ್ವ ಜನಿಕ ಸೇವೆ, ಸಮಾಜದ ಸೇವೆಗಾಗಿ ದುಡಿಯಬೇಕೆಂಬ ಇಚ್ಛೆ ಇರುವವರು. ಕೋಲಾರದ ಪೌರಸಭೆಯ ಸದಸ್ಯರಾಗಿ ೩ ವರ್ಷಗಳು ದುಡಿದಿದ್ದಾರೆ. ವ್ಯಾಯಾಮ ಶಾಲೆ ಮತ್ತು ಹರಿಜನ ಸೇವಕ ಸಂಘದ ಕಾರ್ಯದರ್ಶಿ ಗಳಾಗಿ ಕೆಲಸ ಮಾಡಿದ್ದಾರೆ. ಸ್ಕೂಲ್ ಬೋರ್ಡಿನ ಅಧ್ಯಕ್ಷರಾಗಿ ಮತ್ತು ಸದಸ್ಯರಾಗಿ ಕೆಲಸ ಮಾಡಿದ್ದಾರೆ. ವಿದುರಾಶ್ವತ್ಥದಲ್ಲಿ ನಡೆದ ಗುಂಡಿನ

ಪ್ರಕರಣ ಇವರ ಹೃದಯವನ್ನು ಕೆರಳಿಸಿತು. ಪ್ರತಿಭಟನೆ ತೋರಿಸುವ ಸಲುವಾಗಿ ಸ್ಕೂಲ್ ಬೋರ್ಡಿನ ಅಧ್ಯಕ್ಷಗಿರಿಗೆ ರಾಜೀನಾಮೆ ಕೊಟ್ಟು ಬಿಟ್ಟರು.

ಪಟ್ಟಾಭಿರಾಮನ್‌ರವರು ತಟ್ಟನೆ ರಾಜಕೀಯಕ್ಕೆ ಧುಮುಕಿದವರಲ್ಲ. ಆಳ ನೋಡಿ ಒಳಗೆ ಇಳಿದವರು. ೧೯೩೬ನೆಯ ಇಸವಿಯಲ್ಲಿ ಅಖಿಲ ಭಾರತ ಕಾಂಗ್ರೆಸ್ಸಿಗೆ ಸೇರಿದರು. ಮೈಸೂರು ಕಾಂಗ್ರೆಸ್ ಸ್ಥಾಪನೆಯಾದಂದಿನಿಂದ ಅದರ ಪ್ರಮುಖ ಸದಸ್ಯರಾಗಿ ದುಡಿಯುತ್ತಿದ್ದಾರೆ. ಪ್ರಕಟಣ ಶಾಖಾಧಿಕಾರಿಗಳಾಗಿ ಒಂದು ವರ್ಷವೂ, ಪ್ರಧಾನ ಕಾರ್ಯದರ್ಶಿಗಳಾಗಿ ಎರಡು ವರ್ಷಗಳಲ್ಲೂ ಸೇವೆ ಸಲ್ಲಿಸಿದ್ದಾರೆ. ಮೊದಲನೆಯ ಸಲ ೧೯೩೮ರಲ್ಲಿ ೧೪೪ನೆಯ ಕಾನೂನು ಮುರಿದದ್ದಕ್ಕೆ ದಸ್ತಗಿರಿಯಾಯಿತು. ಮತ್ತೆ ೧೯೪೨ನೆಯ ಆಗಸ್ಟ್‌ನಲ್ಲಿ ಉರಿಗಾಂ ಚಿನ್ನದ ಗಣಿಯಲ್ಲಿ ೩ ತಿಂಗಳು ಶಿಕ್ಷೆಯನ್ನು ಅನುಭವಿಸಿದರು. ಮತ್ತೆ ೧೯೪೭ನೆಯ ಪ್ರಚಂಡ ಬಿರುಗಾಳಿಗೆ ಸಿಕ್ಕಿ ೧೧ ತಿಂಗಳು ಸ್ಥಾನಬದ್ಧತೆಯಲ್ಲಿ ಇರಬೇಕಾಯಿತು.

**ಹುಟ್ಟಿಸಿದವನು ಹುಲ್ಲು ಹಾಕನೆ ?**

ರಾಮನ್‌ರವರ ತ್ಯಾಗ ಹೆಚ್ಚಿನ ಮಟ್ಟದ್ದೇ. ರಾಜಕೀಯದಿಂದ ಇವರು ಅನುಭವಿಸಬೇಕಾಗಿ ಬಂದ ಕಷ್ಟ ಕಣ್ಣು ಕುಕ್ಕಿಸುವಂತಹುದು. ಇವರ ಕುಟುಂಬ ದೊಡ್ಡದು. ಮನೆ ತುಂಬ ಮಕ್ಕಳು. ಆಸ್ತಿವಂತರ ಮನೆತನಕ್ಕೆ ಸೇರಿದವರಲ್ಲವಾದುದರಿಂದ ಪಟ್ಟಾಭಿಯವರ ಸಂಸಾರ ಇವರ ವೃತ್ತಿಯ ಉತ್ಪತ್ತಿಯಿಂದಲೇ ನಡೆಯಬೇಕು. ಆದರೆ ಕಾಂಗ್ರೆಸ್ಸಿಗೆ ಧುಮುಕಿದುದರ ಪರಿಣಾಮವಾಗಿ ಸರ್ಕಾರವು ೧೯೪೦ರಲ್ಲಿ ಇವರ ಸನ್ನದನ್ನು ಕಿತ್ತುಕೊಂಡು, ಇನ್ನುಮುಂದೆ ಪುನಃ ವಕೀಲ್‌ವೃತ್ತಿಯನ್ನೇ ಕೈಕೊಳ್ಳದಂತೆ ಮಾಡಿಬಿಟ್ಟಿತು. ಆದರೂ ಪಟ್ಟಾಭಿರಾಮನ್‌ರವರು ಹಿಂತೆಗೆಯಲಿಲ್ಲ, ಅಧೈರ್ಯಪಡಲಿಲ್ಲ. ರಾಷ್ಟ್ರಸೇವೆಗಾಗಿ ತಮ್ಮ ದೇಹವನ್ನು ಮುಡುಪಾಗಿ ಇಟ್ಟುಬಿಟ್ಟರು. "ಹುಟ್ಟಿಸಿದ ದೇವರು (ದೇವನು) ಹುಲ್ಲು ಹಾಕನೆ?" ಎಂದು ತಮ್ಮ ಸಂಸಾರದ ಸಂಕಟವನ್ನು ಲೆಕ್ಕಿಸದೆ ಮುನ್ನುಗ್ಗಿದ್ದಾರೆ. ದೇಶದ ದಾಸ್ಯ ನಿವಾರಣೆಗಾಗಿ ವ್ರತ ತೊಟ್ಟಿದ್ದಾರೆ.

ಕಷ್ಟದ ಕುಲುಮೆಯಲ್ಲಿ ಬೇಯುತ್ತಿದ್ದರೂ ಇವರ ತ್ಯಾಗ ಬುದ್ಧಿ ತಗ್ಗಿಲ್ಲ. ಇವರ ಧೈರ್ಯ ಕುಗ್ಗಿಲ್ಲ. ಎಂದೂ ಮುಖಗಂಟಿಕ್ಕಿಲ್ಲ. ಅದರಲ್ಲಿ ಸುಕ್ಕು ಕಾಣುತ್ತಿಲ್ಲ. ಮುಂದೇನೆಂಬ ತಾಕಲಾಟವಿಲ್ಲ. ಯಾವಾಗಲೂ ಶಾಂತಿ ಸಮಾಧಾನದ ಮೃದುಹಾಸ ಮುಖದಲ್ಲಿ ಕಂಡುಬರುತ್ತದೆ. ಅಖಂಡ ಗಾಂಭೀರ್ಯ, ಅಪಾರಶಾಂತಿ, ನಿಸ್ವಾರ್ಥ ಸೇವೆ ನಿರಾಡಂಬರವೇ ಪಟ್ಟಾಭಿ ರಾಮನ್‌ರವರ ಜೀವನದ ಪ್ರಧಾನ ಸೂತ್ರ.

ಇವರಿಂದ ಇನ್ನೂ ಆಗಬೇಕಾದ ಕಾರ್ಯ, ಸೇವೆ ಬಹಳವಿದೆ. ಭಾವೀ ರಾಜ್ಯಾಂಗದಲ್ಲಿ ಇವರಿಗೆ ಒಂದು ಸ್ಥಾನವೂ ಇದೆ.



# ಹೆಚ್. ಕೆ. ವೀರಣ್ಣಗೌಡ

ಈಗ ಸುಮಾರು ಎಂಟು ವರ್ಷಗಳ ಕೆಳಗೆ ಪ್ರಥಮತಃ ನಾನು ಅವರನ್ನು ನೋಡಿದ್ದು. ಅದಕ್ಕೆ ಮುಂಚೆ ಅವರನ್ನು ಕೇವಲ ಪತ್ರಿಕೆಗಳ ಮೂಲಕ ಪರಿಚಯಮಾಡಿಕೊಂಡಿದ್ದೆ. ಮೊದಲು ನೋಡಿದಾಗ ನನ್ನ ಮನಸ್ಸಿನಲ್ಲಿ ನೆಲೆಸಿದ ಅವರ ಚಿತ್ರ ಇನ್ನೂ ಅಚ್ಚಳಿಯದೆ ಹಾಗೆಯೇ ನಿಂತಿದೆ. ಅಂದಿನಿಂದಲೂ ಅವರು ಹಾಗೆಯೇ ಇದ್ದಾರೆ.

**ಆಕರ್ಷಕ ವೃತ್ತಿ**

ಆಳು ಅಷ್ಟು ಎತ್ತರವೂ ಅಲ್ಲ, ಕುಳ್ಳಾಗಿಯೂ ಇಲ್ಲ. ಮಧ್ಯ ಅಂತಸ್ತಿನವರ ಮಟ್ಟ. ತಲೆಯಲ್ಲಿ ಸುಂದರವಾದ ಕ್ರಾಪು, ಮುಖದಲ್ಲಿ ಹೊಂಬಣ್ಣ. ಮುಖದ ಮಟ್ಟಕ್ಕೆ ತಕ್ಕನಾದ ಮೂಗು ಮತ್ತು ಕಣ್ಣುಗಳು. ಮಾತನಾಡಲು ಪ್ರಾರಂಭಿಸುವುದಕ್ಕೆ ಮೊದಲೇ ಅವರ ಅರಿವಿಲ್ಲದ ಹುಸಿನಗೆಯು ಅವರ ತುಟಿಗಳ ಮೇಲೆ ಕುಡಿಮೀಸೆಯೊಂದಿಗೆ ಕುಣಿಯುತ್ತಿರುತ್ತದೆ. ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡಬೇಕೆಂಬ ಕುತೂಹಲವನ್ನು ಹುಟ್ಟಿಸುವ ಮನಮೋಹಕ ವದನವದು. ಅದರಲ್ಲಿ ರಸಿಕತೆಯನ್ನು ಹೊರಸೂಸುವ ಮೃದುಹಾಸ. ಅವರೊಡನೆ ಮಾತನಾಡುವುದೆಂದರೆ ಸಕ್ಕರೆ ಸವಿದಂತೆ. ಅಷ್ಟೊಂದು ಹಿತ, ರುಚಿ. ತಮಾಷೆಯ ಮಾತುಗಳನ್ನು ಆಡುತ್ತಾ ನಗೆಯ ಬಾಣಗಳನ್ನು ಬಿಡುತ್ತಿರುತ್ತಾರೆ. ಮಾತನಾಡಲು ಕುಳಿತರೆ ಇನ್ನು ಕೊಂಚ ಹೊತ್ತು ಅವರೊಡನೆ ಮಾತನಾಡಬೇಕೆಂಬ ಇಚ್ಛೆ ಹುಟ್ಟಿಸುವ ವಾಕ್ಸರಣಿ, ವಾಕ್ಚಾತುರ್ಯ ಅವರದು. ಇವೇ ಗೌಡರಲ್ಲಿ ನಾನು ಕಂಡ ಮುಖ್ಯ ಅಂಶಗಳು.

ವೀರಣ್ಣಗೌಡರು ತ್ಯಾಗಿಗಳಲ್ಲಿ ತ್ಯಾಗಿಗಳು. ದೇಶದ ಹಿತಕ್ಕಾಗಿ ದೇಹವನ್ನು ಸವೆಸಬೇಕೆಂಬ ಆಸೆ ಇವರಿಗೆ ೧೫ ವರ್ಷಗಳ ಹಿಂದೆಯೇ ಹುಟ್ಟಿತು. ಆದ್ದರಿಂದಲೇ ರಾಷ್ಟ್ರಸೇವಾಕಾಂಕ್ಷಿಗಳಾಗಿ ಉಪಾಧ್ಯಾಯ ವೃತ್ತಿಗೆ ರಾಜೀನಾಮೆ ಇತ್ತು, ಮುಂದೆ ನುಗ್ಗಿದರು. ಗೌಡರು ಆ ಉಪಾ

ಧ್ಯಾಯ ವೃತ್ತಿಯನ್ನೇ ಕೈಕೊಂಡಿದ್ದರೆ ಇಂದಿನ ಮುಂದಾಳುತನವು ಅವರಿಗೆ ಬರುತ್ತಿರಲಿಲ್ಲವೆಂಬುದು ಶತಸ್ಸಿದ್ಧವಾದ ಮಾತು. ಇವರ ಬಾಲ್ಯ ಮತ್ತು ಬೆಳವಣಿಗೆ ಬಡತನದ ಬಳ್ಳಿಗಳ ಆವರಣದಲ್ಲೇ ನಡೆಯಿತು. ಗೌಡರಿಗೆ ಉಂಡು, ಉಡಲು ಸಾಕಷ್ಟು ಇತ್ತು. ಆದರೆ ಮನಸ್ಸು ಸ್ವಾರ್ಥತೆಯ ಕಡೆ ಹೋಗಲಿಲ್ಲ. ಜನರಲ್ಲಿದ್ದ ಬಡತನದ ಬೇಗೆಗೆ ಇವರ ಆತ್ಮ ಬಲಿಯಾಯಿತು. ಬೋರೇಗೌಡನ ಉದ್ಧಾರವಾದ ಹೊರತು, ದೇಶದ ಕಲ್ಯಾಣವಾಗಲಾರ ದೆಂದು ತಿಳಿದು ತಮಗಿದ್ದ ಸುಖಭೋಗಗಳನ್ನು ತ್ಯಜಿಸಿ ಸಾರ್ವಜನಿಕ ಸೇವಾರಂಗಕ್ಕೆ ಧುಮುಕಿದರು.

## ಪ್ರಸಿದ್ಧ ಪತ್ರಿಕೋದ್ಯಮಿ

ಸಾರ್ವಜನಿಕ ಸೇವೆಗೆ ನಿಂತ ಪ್ರಥಮ ಘಟ್ಟ ೧೯೩೭ ರಲ್ಲಿ. ಅದು ಬೆಂಗಳೂರಿನ ಒಕ್ಕಲಿಗರ ಪತ್ರಿಕೆಯ ಸಂಪಾದಕರಾಗಿ ನೇಮಿಸಲ್ಪಟ್ಟಾಗ. ಎರಡು ವರ್ಷಗಳ ಪರ್ಯಂತ ಆ ಪತ್ರಿಕೆಯ ಸಂಪಾದಕರಾಗಿದ್ದು ಕಾರ ಣಾಂತರದಿಂದ ೧೯೩೯ ರಲ್ಲಿ ಅದಕ್ಕೆ ರಾಜೀನಾಮೆಯನ್ನಿತ್ತರು.

ಅವರ ಪತ್ರಿಕೋದ್ಯಮ ಅಷ್ಟಕ್ಕೆ ನಿಲ್ಲಲಿಲ್ಲ. ವಾರಪತ್ರಿಕೆಯನ್ನು ಬಿಟ್ಟೊಡನೆ ಸ್ವತಂತ್ರವಾಗಿ 'ಚಿತ್ರಗುಪ್ತ' ಎಂಬ ದೈನಂದಿನ ಪತ್ರಿಕೆಯನ್ನು ಹೊರಡಿಸಿದರು. ಅದು ಆ ರಂಗದಲ್ಲಿ ಕ್ರಾಂತಿಯನ್ನುಂಟುಮಾಡಿದ ಪತ್ರಿಕೆ. ಗೌಡರದು ಅಂತಹ ಪ್ರಭಾವಯುತ ಮತ್ತು ಭಾವೋದ್ವೇಗ ಬರವಣಿಗೆ. ಆದ್ದರಿಂದಲೇ ಅವರ ಲೇಖಣಿಯ ತಿವಿತ ತಡೆಯಲಾರದೆ ಸರ್ಕಾರ ೬-೪ ಬಾರಿ ಪತ್ರಿಕೆಯನ್ನು ನಿಲ್ಲಿಸುವುದಾಗಿ ಬೆದರಿಸಿತು. ಗೌಡರು ಬೆದರಲಿಲ್ಲ. ಆಗ 'ಚಿತ್ರಗುಪ್ತ' ಜನಾಭಿಪ್ರಾಯವನ್ನು ಚಿತ್ರಿಸುವ ಪತ್ರಿಕೆಗಳಲ್ಲಿ ಪ್ರಥಮ ಸ್ಥಾನ ಪಡೆದಿತ್ತು. ಅದು ಅನುಸರಿಸಿದ ಮಾರ್ಗ, ಪಡೆದ ಕೀರ್ತಿ, ಇಂದಿನ ಪತ್ರಿಕೆಗಳಿಗೆ ಕೈ ದೀವಟಿಗೆಯಾಗಿದೆಯೆಂದರೆ ತಪ್ಪಲ್ಲ.

ಪತ್ರಿಕೆ ಎಂದರೆ ಗೌಡರಿಗೆ ಬಲು ಆಶೆ. ಪತ್ರಿಕೋದ್ಯಮಿಯಾಗ ಬೇಕೆಂಬ ಇಚ್ಛೆಯಿಂದಲೇ ಅವರು ೧೯೧೬ನೆಯ ವರ್ಷದಿಂದಲೂ ಲೇಖನ ಗಳನ್ನು ಬರೆಯಲುಪಕ್ರಮಿಸಿದರು. ಅಂದಿನಿಂದ ಅವರಿಗೆ ಪತ್ರಿಕೋದ್ಯಮ

ಅಂಟುರೋಗದಂತೆ ಅಂಟಿಕೊಂಡಿತು. ೧೯೨೦ನೇ ವರ್ಷದಲ್ಲಿ ಅಂದರೆ ವಿದ್ಯಾರ್ಥಿ ದೆಶೆಯಲ್ಲಿ ಇರುವಾಗಲೇ 'ಕರ್ನಾಟಕ ವಿದ್ಯಾರ್ಥಿ'ಯೆಂಬ ದ್ವೈಮಾಸಿಕ ಪತ್ರಿಕೆಯ ಉಪಸಂಪಾದಕರಾಗಿದ್ದರು. ಅಂದಿನಿಂದಲೂ ಇವರ ಲೇಖನಗಳು ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವುವಲ್ಲದೆ ಜನಾದರಣೀಯವಾಗಿವೆ.

ಇವರ ಬರವಣಿಗೆಯಲ್ಲಿ ಸಾಹಿತ್ಯದ ಸೊಗಸಿಲ್ಲ. ಆದರೂ ಅವರ ಭಾಷೆ ಬಹು ಚಂದ, ಗಂಭೀರ. ಓದುವವರ ಹೃದಯವನ್ನು ಕೆಣಕಿ, ಕೆದಕಿ, ಕೆರಳಿಸುವ ಶಕ್ತಿ ಇದೆ. ಇವರ ಲೇಖನಗಳು ನಿರ್ಭಯ, ನಿಸ್ಸಂಕೋಚವಾದವುಗಳು. ಅಲಂಕಾರಪೂರಿತವಾಗಿರಬೇಕೆಂದು ನೈಜ ಸನ್ನಿವೇಶಗಳನ್ನು ಮರೆಮಾಚುವ ಸ್ವಭಾವವಿಲ್ಲ. ಮನಸ್ಸಿನ ಭಾವವನ್ನು ಹೊರಹೊರಟಂತೆ ಬರೆಯುವ ಪದ್ಧತಿ.

ಅವರ ಮಾತುಗಳೂ ಸಹ ಅಷ್ಟೇ ಸೊಗಸು. ಮಿತವಾಗಿ, ಹಿತವಾಗಿ ಮಾತನಾಡಿ ಮರುಳುಗೊಳಿಸಬಲ್ಲರು. ಭಾಷಣ ಮಾಡಲು ನಿಂತರೆ ಗಂಟೆಗಟ್ಲೆ ಮಾತನಾಡಬಲ್ಲರು. ಎಲ್ಲವನ್ನೂ ಎರಡೇ ನಿಮಿಷಗಳಲ್ಲಿ ಹೇಳಿ ಮುಗಿಸಲೂ ಬಲ್ಲರು. ಅಂತಹ ದಕ್ಷತೆ ಅವರದು. ಅವರ ಮಾತಿನ ಪೆಟ್ಟು ಕೊಂಚ ಬಿರುಸಾದುದೇ ಎಂದು ಹೇಳಬೇಕು. ಹಲವು ವೇಳೆ ಚೇಳು ಕುಟಕಿದಂತೆ. ಮೈಸೂರು ಕನ್ನಡ, ಧಾರವಾಡ ಕನ್ನಡ, ಮಂಗಳೂರು ಕನ್ನಡ ಈ ಎಲ್ಲಾ ಕನ್ನಡ ಭಾಷೆಗಳಲ್ಲೂ ಅವರವರಿಗೆ ಬೇಕಾದಂತೆ ಅದೇ ಧಾಟಿಯಲ್ಲಿ ಮಾತನಾಡುವ ಶಕ್ತಿ ಗೌಡರಿಗೆ ಚೆನ್ನಾಗಿದೆ.

## ಬಾಲ್ಯದಲ್ಲೇ ಪ್ರತಿಭಾಶಾಲಿ

ವೀರಣ್ಣಗೌಡರು ಹುಟ್ಟಿದ್ದು ಚನ್ನಪಟ್ಣ ತಾಲ್ಲೂಕ್ ಸಾದರಹಳ್ಳಿಯೆಂಬ ಗ್ರಾಮದಲ್ಲಿ. ಬೆಳೆದದ್ದು ಅವ್ವೇರ ಹಳ್ಳಿಯಲ್ಲಿ. ಸುಮಾರು ಹನ್ನೆರಡು ವರುಷದ ಬಾಲಕನಾಗುವ ವರೆವಿಗೂ ಹಳ್ಳಿಯಲ್ಲೇ ವಿದ್ಯಾಭ್ಯಾಸ ಕೊಡಲಾಯಿತು. ಹಳ್ಳಿಯಲ್ಲಿ ಹುಟ್ಟಿ ಬೆಳೆದ ಹುಡುಗ ಬಾಲ್ಯದಲ್ಲೇ ತನ್ನ ಪ್ರತಿಭೆಯನ್ನು ತೋರಿಸಿಬಿಟ್ಟ. ಎರಡು ವರ್ಷಗಳು ಒಂದೇ ಸಮನಾಗಿ

ಪ್ರಥಮ ಸ್ಥಾನವನ್ನು ಪಡೆದು ಬಹುಮಾನಗಳನ್ನು ಗಳಿಸಿದನು. ಲೋಅರ್ ಸೆಕಂಡರಿ ಪರೀಕ್ಷೆಯಲ್ಲಿ ಪ್ರಥಮ ತರಗತಿಯಲ್ಲಿ ಉತ್ತೀರ್ಣನಾದನು.

ಇದರಿಂದ ತಂದೆಗೆ ಮಗನ ಮೇಲೆ ಪ್ರೀತಿವಿಶ್ವಾಸಗಳು ಹೆಚ್ಚಲು ಆರಂಭವಾಯಿತು. ಅನಂತರ ಚನ್ನಪಟ್ಟಣದ ಹೈಸ್ಕೂಲಿಗೆ ವಿದ್ಯಾಭ್ಯಾಸಕ್ಕೆ ಕಳುಹಿಸಿದರು. ೧೯೨೧ನೇ ವರ್ಷ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಮೈಸೂರಲ್ಲಿ ಎಂಟ್ರನ್ಸ್ ಕ್ಲಾಸಿಗೆ ಸೇರಿದರು. ಆದರೆ ಇವರ ದುರಾದೃಷ್ಟದಿಂದ ಅಲ್ಲಿಂದ ವಿದ್ಯಾಭ್ಯಾಸ ಮುಂದುವರಿಸಲು ಅವಕಾಶ ವಾಗಲಿಲ್ಲ. ಏನು ಮಾಡಲೂ ತೋಚದೆ ಅವರ ಜೀವ ಉಪಾಧ್ಯಾಯ ವೃತ್ತಿಯ ಕಡೆಗೆ ಎಳೆಯಿತು.

**ಸಮಾಜ ಸುಧಾರಕ**

ಸರಿ ೧೯೨೩ ರಿಂದ ೧೯೨೬ನೇ ವರ್ಷದ ವರೆಗೆ ೩ ವರ್ಷಗಳ ಕಾಲ ಮುಖ್ಯೋಪಾಧ್ಯಾಯರಾಗಿ ಕೆಲಸಮಾಡಿದರು. ೧೯೨೬ರಲ್ಲಿ ಶಿಕ್ಷಣ ಶಾಲೆ ಯಲ್ಲಿ ಶಿಕ್ಷಣ ತೆಗೆದುಕೊಳ್ಳಬೇಕೆಂಬ ಆಜ್ಞೆ ಬಂತು. ಗೌಡರು ಶಿಕ್ಷಣ ಶಾಲೆಗೆ ಹೊರಟರು. ಸೇವಾಮನೋಭಾವದ ಗೌಡರಿಗೆ ಈ ಉಪಾಧ್ಯಾಯ ವೃತ್ತಿಯಲ್ಲಿ ನಿಜವಾದ ಸೇವೆಯನ್ನು ಸಲ್ಲಿಸಲು ಸಾಧ್ಯವಿಲ್ಲವೆಂದು ಸ್ಪಷ್ಟ ವಾಗಿ ತಿಳಿದುಬಂತು. ಅಂದೇ ಆ ವೃತ್ತಿಗೆ ರಾಜೀನಾಮೆ ಇತ್ತರು. ಅಲ್ಲಿಂದಾಚೆಗೇ ಇವರು ಪತ್ರಿಕಾ ಪ್ರಪಂಚಕ್ಕೆ ಕಾಲಿಟ್ಟದ್ದು.

ಹೊರಲಾರದಂಥ ಹೃದಯ ವೇದನೆಯೊಂದು ಗೌಡರ ಹೃದಯದಲ್ಲಿ ಮನೆ ಮಾಡಿಕೊಂಡಿದೆಯೆಂಬುದು ಅವರೊಡನೆ ಮಾತನಾಡುತ್ತಾ ಸೂಕ್ಷ್ಮ ವಾಗಿ ಪರಿಶೀಲಿಸಿದರೆ ತಿಳಿದುಬರುತ್ತದೆ. ಮುಖದಲ್ಲಿ ಯಾವಾಗಲೂ ಹುಸಿನಗೆಯು ಹೊರಸೂಸುತ್ತಿದ್ದರೂ ಅದು ಅಂತರಾಳದಿಂದ ಬರುವಂತೆ ನಮಗೆ ಕಂಡು ಬರುವುದಿಲ್ಲ. ಯಾರ ಉನ್ನತಿಗಾಗಿ ದುಡಿಯಲು ಸಾರ್ವ ಜನಿಕ ರಂಗಕ್ಕೆ ಧುಮುಕಿದೆನೋ, ಯಾರ ಉದ್ಧಾರವು ದೇಶದ ಉದ್ಧಾರ ವೆಂದು ಭಾವಿಸಿ ಸ್ವಂತ ಕಾರ್ಯಗಳನ್ನು ಬದಿಗೊತ್ತಿ ಟೊಂಕ ಕಟ್ಟಿ ನಿಂತೆನೋ, ಆ ಆಸೆಯು ಇನ್ನೂ ಫಲಪ್ರದವಾಗಲಿಲ್ಲ ಎಂಬ ಕೊರಗೊಂದು

ಗೌಡರ ಮನದಲ್ಲಿ ಮನೆಮಾಡಿಕೊಂಡಿದೆ. ಅದು ಅವರ ಹೃದಯವನ್ನು ಕುದಿಸುತ್ತಿರುವಂತಿದೆ.

ರಾಷ್ಟ್ರಸೇವೆಯೊಂದೇ ಗೌಡರ ಕಾರ್ಯವಾಗಿಲ್ಲ. ದೇಶಸೇವೆಯಷ್ಟೇ ಸಮಾಜಸೇವೆ ಮತ್ತು ಸಮಾಜ ಸುಧಾರಣೆಗಳಲ್ಲಿ ತಮ್ಮ ಪಾತ್ರ ತೋರಿಸಿದ್ದಾರೆ. ತಾವೇ ವಿಧವಾ ವಿವಾಹಕ್ಕೆ ಒಪ್ಪಿ ಸಮಾಜಕ್ಕೆ ಮಾದರಿಯಾಗಿದ್ದಾರೆ. ಗೌಡರ ಮತ್ತು ತಾಯಮ್ಮ (ಅವರ ಪತ್ನಿ) ನವರ ಮಧುರ ಬಾಂಧವ್ಯ ನೋಡಿ ಕರುಬುವವರು ಎಷ್ಟೋ ಮಂದಿ! ಇವರೀರ್ವರ ವಿವಾಹವೊಂದು ಆದರ್ಶ. ಇವರುಗಳ ಜೀವನ ಇತರರಿಗೊಂದು ಮಾರ್ಗ.

**ಸರ್ಕಾರ ನಡುಗಿತು**

ವೀರಣ್ಣಗೌಡರು ಹುಟ್ಟು ಚಳುವಳಿಗಾರರು. ಇಂದಿನ ಮೈಸೂರು ಕಾಂಗ್ರೆಸ್ ಜನ್ಮ ತಾಳುವುದಕ್ಕಿಂತ ಮುಂಚೆಯೇ ಒಂದು ದೊಡ್ಡ ಚಳುವಳಿಯನ್ನು ಆರಂಭಿಸಿದ್ದರು. ಅದೇ ಇರ್ವಿನ್ ನಾಲಾ ರೈತರ ಚಳುವಳಿ. ಮೈಸೂರಿನ ಇತಿಹಾಸದಲ್ಲಿ ಇರ್ವಿನ್ ನಾಲಾ ರೈತರ ಚಳುವಳಿಗೆ ಒಂದು ಸ್ಥಾನವಿದೆ. ಅವರು ಆ ಚಳುವಳಿಯಲ್ಲಿ ಮುಂದಾಳುಗಳಾಗಿ ನಿಲ್ಲದೇ ಹೋಗಿದ್ದರೆ, ಅಲ್ಲಿನ ರೈತರ ಹಿತ ಸಾಧನೆಯಾಗುತ್ತಿರಲಿಲ್ಲ. ಶಿಕಾರಿಪುರದ ತಾಲ್ಲೂಕಿನಲ್ಲಿ ಶ್ರೀ ಮರಿಸ್ವಾಮಿ ಹಿರೇಮಠ ಇವರು ಕರ ನಿರಾಕರಣ ಚಳುವಳಿಯನ್ನು ಆರಂಭಿಸಿ ಮೈಸೂರು ಸರ್ಕಾರವನ್ನು ಹೇಗೆ ನಡುಗಿಸಿದರೋ, ಅದೇ ರೀತಿಯಲ್ಲಿ ಗೌಡರು ಇರ್ವಿನ್ ನಾಲಾ ರೈತರ ಚಳುವಳಿಯನ್ನು ಆರಂಭಿಸಿ ಸರ್ಕಾರವನ್ನು ಅಲ್ಲಾಡಿಸಿ ಬಿಟ್ಟರು.

ಈ ಚಳುವಳಿಯ ಸಂಬಂಧವಾಗಿ ನಾಲ್ಕು ಸಾವಿರ ರೈತರನ್ನು ಮಂಡ್ಯ ಮತ್ತು ಮದ್ದೂರು ತಾಲ್ಲೂಕಿನಿಂದ ಬೆಂಗಳೂರಿಗೆ ಕಾಲ್ನಡಿಗೆಯಲ್ಲೇ ಇವರು ಕರೆದುಕೊಂಡು ಬಂದ ಪ್ರಚಂಡ ಮೆರವಣಿಗೆಯನ್ನು ಜ್ಞಾಪಿಸಿಕೊಂಡರೆ ಎದೆ ಜಲ್ಲೆನಿಸುತ್ತದೆ. ಅವರೆಲ್ಲರೂ ಬೆಂಗಳೂರು ಅಠಾರಾ ಕಚೇರಿಯ ಬಳಿ ಬಂದು ನಿಂತಾಗ ಮುತ್ತಿಗೆಯೊಂದು ನಡೆದಂತೆ ಕಾಣಿಸುತ್ತಿತ್ತು. ಆ ದೃಶ್ಯವನ್ನು ನೋಡಿದವರಾರೂ ಅವರ ಜೀವಮಾನ ಪರ್ಯಂತ

ಅದನ್ನು ಮರೆಯುವಂತಿಲ್ಲ. ಸರ್ಕಾರದಲ್ಲಿ ರೈತರ ಅಹವಾಲನ್ನು ತಿಳಿಸಿ, ರೈತರಿಗೆ ಸುಮಾರು ಐವತ್ತು ಲಕ್ಷ ರೂಪಾಯಿಗಳ ಮಿಗಿತಾಯ ಮಾಡಿಸಿ ಕೊಟ್ಟರು.

ನಾಯಕ ಪಟ್ಟಕ್ಕೆ ವಿಶ್ವವಿದ್ಯಾನಿಲಯದ ಪ್ರಶಸ್ತಿಗಳ ಅವಶ್ಯಕತೆ ಇಲ್ಲ. ಅವುಗಳಿಂದ ಪ್ರಯೋಜನವೂ ಇಲ್ಲ. ಉಚ್ಚ ತರಗತಿಯ ವಿದ್ಯಾಭ್ಯಾಸವಾಗಲೀ, ಅಪಾರ ದ್ರವ್ಯವಾಗಲೀ ಮುಖಂಡತನ ತರಲಾರವು. ಅದಕ್ಕೆ ವಿಶಾಲ ಹೃದಯ ಬೇಕು. ದೇಶಾಭಿಮಾನ ಮತ್ತು ಪ್ರಜಾಸೇವೆಯ ಇಚ್ಛೆ ಇರಬೇಕು. ಆಗ ಮುಂದಾಳುತನದ ಪಟ್ಟ ತಾನಾಗಿಯೇ ತಳ್ಳಿಕೊಂಡು ಬರುತ್ತದೆ.

## ಜೈಲು ವಾಸಗಳು

ಸರ್ಕಾರದ ಕಣ್ಣು ಗೌಡರಮೇಲೆ ಬಿದ್ದದ್ದು ಪ್ರಥಮತಃ ೧೯೨೯ನೇ ವರ್ಷ ನಡೆದ ಎರಡನೇ ದೊಂಬಿ ಮೊಖದ್ದಮೆಯಲ್ಲಿ. ಈ ಮೊಖದ್ದಮೆ, ಯಾವ ಶಿಕ್ಷೆಯೂ ಆಗದೆ, ವಜಾಮಾಡಲ್ಪಟ್ಟಿತು. ಇವರು ನಡೆಸಿದ ಇರ್ವಿನ್ ನಾಲಾ ರೈತರ ಚಳುವಳಿಯ ಸಂಬಂಧವಾಗಿ ಕೆಲವು ಮೊಖದ್ದಮೆಗಳು ಹಾಕಲ್ಪಟ್ಟು ಒಂದುತಿಂಗಳ ಶಿಕ್ಷೆಯೂ ಆಯಿತು. ಆದರೆ ಅದು ಅಪೀಲಿನಲ್ಲಿ ವಜಾಮಾಡಲ್ಪಟ್ಟಿತು. ಇವರ ಮೇಲೆ ಅನೇಕ ವೇಳೆ ಮೊಖದ್ದಮೆಗಳ ಮೇಲೆ ಮೊಖದ್ದಮೆಗಳು ಹೂಡಲ್ಪಟ್ಟಿದ್ದರೂ ಕಾರಾಗೃಹದ ಸೌಖ್ಯ ಮಾತ್ರ ದೊರೆಯಲಿಲ್ಲ.

೧೯೩೪ನೇ ವರ್ಷ ಕಾಂಗ್ರೆಸ್ ಪ್ರಚಾರ ಕಾರ್ಯ ಮಾಡುತ್ತಿರುವಾಗ್ಗೆ ನೇಕ್ಚಾಲ್ ಜಾಮೀನ್ ಮೊಖದ್ದಮೆಯೊಂದು ಇವರಮೇಲೆ ಹೂಡಲ್ಪಟ್ಟು ಜಾಮೀನು ಕೊಡದೆ ಹೋದುದಕ್ಕಾಗಿ ಒಂದು ವರ್ಷ ಶಿಕ್ಷೆಗೆ ಗುರಿಯಾದರು. ಆದರೆ ಅದೇ ದಿನ ರಾಜಕೀಯ ಖೈದಿಗಳನ್ನು ಸರ್ಕಾರದವರು ಬಿಡುಗಡೆ ಮಾಡಿದುದರಿಂದ ಇವರು ಕಾರಾಗೃಹವನ್ನೇ ನೋಡಲಿಲ್ಲ. ಈ ರೀತಿ ಅದೃಷ್ಟವಶಾತ್ ಕಾರಾಗೃಹವಾಸಗಳನ್ನೆಲ್ಲಾ ತಪ್ಪಿಸಿಕೊಂಡ ಗೌಡರಿಗೆ ೧೯೩೮ನೇ ವರ್ಷ ಚಿನ್ನದ ಗಣಿಯಲ್ಲಿ ಕಾನೂನು ಉಲ್ಲಂಘನೆ

ಮಾಡಿದರೆಂಬ ಅಪಾದನೆಯ ಮೇಲೆ ಮೂರು ತಿಂಗಳು ಕಠಿಣ ಸಜವನ್ನು ವಿಧಿಸಲಾಯಿತು. ಅದನ್ನು ಪೂರ್ಣವಾಗಿ ಅನುಭವಿಸಿ ಬಂದರು. ಮತ್ತೆ ೧೯೪೨ನೇ ಬಿರುಗಾಳಿಗೆ ಸಿಕ್ಕಿ ೧೬ ತಿಂಗಳು ಕಾಲ ಸ್ಥಾನಬದ್ಧತೆಯಲ್ಲಿದ್ದರು.

**ಅಪನಂಬಿಕೆ ಏಕೆ?**

ನಮ್ಮೂರಿಗೆ ಒಮ್ಮೆ ಬಂಧಿದ್ದ ವೇಳೆ ಗೌಡರನ್ನು ನೋಡಿ ನನ್ನ ಮಿತ್ರನೊಬ್ಬ "ಏನು! ಗೌಡರು ಕೊಂಚ ರಸಿಕರಿದ್ದಂತೆ ಕಾಣುತ್ತದೆಯಲ್ಲಾ?" ಎಂದು ಕೇಳಿದ. "ಹಾಗೆ ಗಟ್ಟಿಯಾಗಿ 'ಕೊಂಚ' ಎನ್ನಬೇಡ, ಅವರು ರಸಿಕ ಶಿಖಾಮಣಿಗಳು ಗೊತ್ತಿಲ್ಲವೆ?" ಎಂದು ನನ್ನ ಇನ್ನೊಬ್ಬ ಮಿತ್ರನು ಅವನಿಗೆ ಉತ್ತರವಿತ್ತನು. 'ಭಲೆ' ಎಂದುಕೊಂಡೆ.

ಗೌಡರಿಗೆ ರಷ್ಯಾ ಸಾಹಿತ್ಯದಮೇಲೆ ಹೆಚ್ಚಿನ ಅಭಿಮಾನ, ಹೆಚ್ಚಿನ ವಿಶ್ವಾಸ. ಅದನ್ನು ಚೆನ್ನಾಗಿ ಓದಿ ಮನನ ಮಾಡಿಕೊಂಡಿದ್ದಾರೆ. ಮಾರ್ಕ್ಸನ ಸಿದ್ಧಾಂತದ ಮೇಲೆ ಮಮತೆ ಹೆಚ್ಚು. ಆ ಬಗ್ಗೆ ಸೊಗಸಾಗಿ ಮಾತಾಡ ಬಲ್ಲರು. ಚರ್ಚೆ ಮಾಡಬಲ್ಲರು. ಸಮತಾವಾದ, ಸಮಾಜವಾದಗಳ ಬಗ್ಗೆ ಜೈಲಿನಲ್ಲಿ ಬರೆದಿರುವ ಪುಸ್ತಕಗಳು ಇಷ್ಟರಲ್ಲೇ ಪ್ರಕಟವಾಗಲಿವೆ.

ಮೈಸೂರು ಕಾಂಗ್ರೆಸ್ಸಿನ ಮುಂದಾಳುಗಳಲ್ಲಿ ಸಾರ್ವಜನಿಕ ಸೇವೆಗೆ ಟೊಂಕ ಕಟ್ಟಿ ನಿಂತವರು ಬಹಳ ಮಂದಿ ಇದ್ದಾರೆ. ಆದರೆ ಗೌಡರಂತೆ ಸಾರ್ವಜನಿಕ ಸೇವೆಗೆ ತಮ್ಮನ್ನೇ ಅರ್ಪಿಸಿ ದುಡಿಯುತ್ತಿರುವವರು ಬಹಳ ಕಡಿಮೆ. ಇವರದು ಹಗಲಿರುಳೂ ದುಡಿತ. ಅದಕ್ಕಾಗಿ ಈಗ ೧೫ ವರ್ಷಗಳಿಂದ ಒಂದೇ ನಿಟ್ಟಿನಲ್ಲಿ ನಿಂತಿದ್ದಾರೆ. ಜೀವನದ ಎಲ್ಲಾ ಸುಖಗಳನ್ನೂ ಧಾರೆ ಯೆರೆದಿದ್ದಾರೆ. ಬಡತನದ ಬಾಧೆಗೆ ಬಲಿಯಾಗಿದ್ದಾರೆ. ಆದರೂ ಇವರ ದೃಢತೆ ಚಲಿಸಲಿಲ್ಲ. ಮುನ್ನುಗ್ಗಿ ಮಾಡಬೇಕಾದ ಎಲ್ಲಾ ತ್ಯಾಗ ಮತ್ತು ಬಲಿದಾನಗಳನ್ನು ಮಾಡುತ್ತಿದ್ದಾರೆ.

ಇಂತಹ ತ್ಯಾಗಮೂರ್ತಿಯ ಕಡೆಗೂ ಸಹ ಬೆರಳು ತೋರಿಸುವವರು ನಮ್ಮಲ್ಲಿ ಅನೇಕರುಂಟು. 'ಅವರನ್ನು ನಂಬುವುದು ಕಷ್ಟ' ಎಂಬುದೊಂದನ್ನು ಬಿಟ್ಟು ಇನ್ನಾವುದೂ ಲೇಖಕನ ಕಿವಿಗೆ ಬಿದ್ದಿಲ್ಲ. ಸಾರ್ವಜನಿಕ

ಸೇವೆಗೆ ಇಳಿದವರಿಗೆ ಇಂತಹ ಅಪವಾದ-ಅವಹೇಳನಗಳು ಹೊಸದಲ್ಲವೆಂದು ಅರಿತಿರುವ ಗೌಡರು ಇವುಗಳಾವುದಕ್ಕೂ ಕಿವಿಗೊಡದೆ ತಮ್ಮ ಕಾರ್ಯದಲ್ಲಿ ನಿರತರಾಗಿದ್ದಾರೆ. ಅದೇ ನಿಜವಾದ ನಿಸ್ವಾರ್ಥ ಸೇವೆಯೆಂಬುದು ಅವರಿಗೆ ಮನವರಿಕೆಯಾಗಿಹೋಗಿದೆ.

**ಸಭಾ ಪರಿತ್ಯಾಗ**

ಗೌಡರಿಗೆ ಸ್ಥಳೀಯ ಸಂಸ್ಥೆಗಳಲ್ಲೂ ಸಾಕಷ್ಟು ಪರಿಶ್ರಮವುಂಟು. ಮೈಸೂರು ಜಿಲ್ಲಾ ಬೋರ್ಡ್ ಸದಸ್ಯರಾಗಿ ದುಡಿದಿದ್ದಾರೆ. ಮದ್ದೂರು ಪೌರಸಭಾ ಉಪಾಧ್ಯಕ್ಷರಾಗಿ ಕೆಲಸ ಮಾಡಿದ್ದಾರೆ. ಕಬ್ಬು ಬೆಳೆಯುವವರ ಸಂಘದ ಅಧ್ಯಕ್ಷರಾಗಿಯೂ ಇದ್ದರು. ಪ್ರಜಾಪ್ರತಿನಿಧಿ ಸಭೆಯಲ್ಲಿ ಸದಸ್ಯರಾಗಿದ್ದ ವೇಳೆ ಭಾಷ್ಯಂ ಮತ್ತು ತಿಮ್ಮಾರೆಡ್ಡಿಯವರನ್ನು ರಾಜದ್ರೋಹಕ್ಕಾಗಿ ಅನಿರೀಕ್ಷಿತವಾಗಿ ದಸ್ತಗಿರಿ ಮಾಡಿದ ಸರ್ಕಾರದ ನೀತಿಯನ್ನು ಪ್ರತಿಭಟಿಸುವ ಸಲುವಾಗಿ ೧೪೦ ಜನ ಕಾಂಗ್ರೆಸ್ ಮತ್ತು ಇತರ ಸದಸ್ಯರನ್ನು ಕರೆದುಕೊಂಡು ಸಭಾ ಪರಿತ್ಯಾಗ ಮಾಡಿದ ಮಹಾನುಭಾವ. ಆಗ ಗೌಡರೇ ಪ್ರಜಾಪ್ರತಿನಿಧಿ ಸಭೆಯ ಕಾಂಗ್ರೆಸ್ ಪಕ್ಷದ ನಾಯಕರು. ಸಭಾ ಪರಿತ್ಯಾಗಕ್ಕೆ ಮುನ್ನ ದಿವಾನರಿಗೆ ತಮ್ಮ ಪ್ರತಿಭಟನೆಯನ್ನು ತಿಳಿಸಿ ತಮ್ಮ ಒಡನಾಡಿಗಳೊಂದಿಗೆ ಇವರು ಒಟ್ಟಿಗೆ ಹೊರಹೊರಟ ದೃಶ್ಯ ಯಾರೂ ಮರೆಯುವಂತಿಲ್ಲ. ಗದ್ದುಗೆಯಮೇಲೆ ಕುಳಿತಿದ್ದ ಬ್ರಿಟಿಷ್ ರೆಸಿಡೆಂಟರೇ ಮೊದಲಾಗಿ ಎಲ್ಲಾ ಅಧಿಕಾರಿಗಳ ಎದೆಯೂ ಜಗ್ಗಿತು. ಅಂತಹ ಪ್ರಚಂಡ ನಾಯಕ ಶಿರೋಮಣಿ ಇವರು.

ಈಗ ಹದಿನಾರು ವರ್ಷಗಳ ಹಿಂದೆ ಅಂದರೆ ೧೯೩೮ನೇ ವರ್ಷ ಸ್ಥಾಪಿತವಾದ ಮೈಸೂರು ಸ್ಟೇಟ್ ಕಾಂಗ್ರೆಸ್ ಸಂಸ್ಥೆಯ ಸದಸ್ಯರಾಗಿ ದುಡಿದವರ ಪೈಕಿ ಈ ಹೊತ್ತಿನ ದಿನವೂ ಸಹ ಮೈಸೂರು ಕಾಂಗ್ರೆಸ್ಸಿನಲ್ಲಿ ದುಡಿಯುತ್ತಿರುವವರೆಂದರೆ ಗೌಡರೊಬ್ಬರೇ. ಇವರು ಆಗ ಆ ಸಂಸ್ಥೆಯ ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟಿದ್ದರು. ಅಂದಿನಿಂದ ಇಂದಿನವರೆಗೂ ಕಾಂಗ್ರೆಸ್ ಸಂಸ್ಥೆಯನ್ನು ಬಿಟ್ಟು ಮತ್ತಿನ್ನಾವ ರಾಜಕೀಯ ಸಂಸ್ಥೆಗೂ

ಸೇರದೆ ಇರುವುದು ಗಮನಾರ್ಹವಾದ ವಿಚಾರ. ಕಾಂಗ್ರೆಸ್ಸಿನ ಮೇಲೆ ಇವರು ಇಟ್ಟಿರುವ ನಿಶ್ಚಲ, ನಿರ್ಮಲ ಭಕ್ತಿ ವಿಶ್ವಾಸಗಳಿಗೆ ಇದೇ ನಿದರ್ಶನ.

**ಅದ್ವಿತೀಯ ಕಾರ್ಯದರ್ಶಿ**

ಕಾರ್ಯದರ್ಶಿಯ ಕಾರ್ಯವನ್ನು ಸುಗಮವಾಗಿ ನಡೆಯಿಸುವುದರಲ್ಲಿ ಇವರು ಅದ್ವಿತೀಯರು. ಆ ವಿಷಯದಲ್ಲಿ ಸಂಶಯವಿಲ್ಲ. ಅಂತಹ ಸಾಮರ್ಥ್ಯ, ಅನುಭವ, ಚಾತುರ್ಯ ಎಲ್ಲವೂ ಇವೆ. ಆದ್ದರಿಂದಲೇ ಇವರು ಸೇರುವ ಸಂಸ್ಥೆ, ಸಮಿತಿಗಳಲ್ಲಿ ಕಾರ್ಯದರ್ಶಿಯ ಪಟ್ಟ ಇವರಿಗೇ ಕಟ್ಟಿಟ್ಟ ಮುಡುಪು. ದಿವಂಗತ ಎಂ. ವೆಂಕಟಕೃಷ್ಣಯ್ಯನವರ ಅಧ್ಯಕ್ಷತೆಯಲ್ಲಿ ಸ್ಥಾಪಿತವಾದ ಮೈಸೂರು ಸ್ಟೇಟ್ ಕಾಂಗ್ರೆಸ್ಸಿಗೆ ಇವರೇ ಕಾಯದರ್ಶಿ. ೧೯೩೦ರಲ್ಲಿ ಮೈಸೂರು ಕಾಂಗ್ರೆಸ್ಸಿನ ಹಂಗಾಮಿ ಕಾರ್ಯದರ್ಶಿ. ಸಂಸ್ಥಾನದ ಪಟೇಲರುಗಳ ಸಮ್ಮೇಳನದ ಕಾರ್ಯದರ್ಶಿ; ವಿದುರಾಶ್ವತ್ಥದ ಕಾಂಗ್ರೆಸ್ ವಿಚಾರಣಾ ಸಮಿತಿಯ ಕಾರ್ಯದರ್ಶಿ; ಈ ರೀತಿ ಎಲ್ಲಾ ಕಡೆಗಳಲ್ಲೂ ಕಾರ್ಯದರ್ಶಿಯ ಸ್ಥಾನವನ್ನು ಅಲಂಕರಿಸಿ ದಕ್ಷತೆಯಿಂದ ಕೆಲಸ ಮಾಡಿದ್ದಾರೆ. ಈಗಲೂ ಸಹ ಇವರು ಮೈಸೂರು ಕಾಂಗ್ರೆಸ್ಸಿನ ಸಹಾಯಕ ಕಾರ್ಯದರ್ಶಿಗಳಾಗಿದ್ದಾರೆ.

ವೀರಣ್ಣಗೌಡರು ವಿಚಾರಶೀಲರು, ಸರ್ವ ಸಮತಾವಾದಿಗಳು. ಅವರ ವಿಚಾರ ಶೀಲತೆ ಉನ್ನತ ಮಟ್ಟದ್ದು. ಯಾವ ವಿಷಯವನ್ನೇ ಆಗಲಿ ತುಲನ ಮಾಡಿ ನೋಡುವುದು ಹೆಚ್ಚು. ದುಡುಕಿನ ಸ್ವಭಾವವಿಲ್ಲ; ದೂರದೃಷ್ಟಿ ಇದೆ. ಸಿಟ್ಟಿಲ್ಲ; ಶಾಂತತೆ ಇದೆ. ನಸುಕಿಸಿಂದ ನಡುರಾತ್ರಿಯವರೆಗೂ ದುಡಿಯಬಲ್ಲ ತಾಳ್ಮೆ ಇದೆ. ಇಚ್ಛೆ ಇದೆ. ಅವರ ಸೇವಾ ಅನುಭವ ಅಪಾರವಾದದ್ದು. ಆ ಬಗ್ಗೆ ಯಾರೂ ಬೆರಳು ತೋರಿಸುವಂತಿಲ್ಲ.

ಪ್ರಚಾರ ಕಾರ್ಯದಲ್ಲಿ ಅವರ ಅನುಭವ ಅಸಮಾನವಾದುದು. ಅವರಂತೆ ಅವಿಶ್ರಾಂತರಾಗಿ ದೇಶ ಸುತ್ತುವವರು ನಮ್ಮಲ್ಲಿ ಬಹುಮಂದಿ ಸಿಗಲಾರರು. ಸಂಸ್ಥಾನಾಮಳೆ ಕಾಂಗ್ರೆಸ್ ನಾಯಕರು ಪ್ರಚಾರಕ್ಕೆ ಹೊರಟರೆ ವೀರಣ್ಣಗೌಡರು ಇಲ್ಲದೇ ಇರುವುದಿಲ್ಲ. ೧೯೩೭ನೇ ವರ್ಷ

ಅಂತ್ಯದಲ್ಲಿ ಇವರು ತಮ್ಮ ಪತ್ನಿಯೊಡನೆ ಪ್ರವಾಸ ಹೊರಟು ನಡೆಸಿದ ಪ್ರಚಾರವನ್ನು ಮರೆಯಲಾದೀತೆ? ಸುಮಾರು ೨ ತಿಂಗಳು ಅವ್ಯಾಹತವಾಗಿ ಸಾವಿರಾರು ಮೈಲಿಗಳನ್ನು ಸುತ್ತಿ ನೂರಾರು ಸಭೆಗಳನ್ನು ನಡೆಯಿಸಿ ಜನತೆಯನ್ನು ಎಚ್ಚರಗೊಳಿಸಿದ್ದಾರೆ.

ರೈತ ಮನೆತನದಲ್ಲಿ ಜನಿಸಿ, ರೈತ ಮನೆತನದಲ್ಲಿ ಬೆಳೆದು, ರೈತ ವೃತ್ತಿಯನ್ನೇ ಅವಲಂಬಿಸಬೇಕಾಗಿದ್ದ ವೀರಣ್ಣಗೌಡರು ನೇಗಿಲು ಹಿಡಿಯುವುದನ್ನು ಬಿಟ್ಟು, ಲೇಖನಿಯನ್ನು ಹಿಡಿದು ಪತ್ರಿಕೋದ್ಯಮಿಯಾಗುವರೆಂದು ಅರಿತಿದ್ದವರು ಯಾರು? ಹೊಲ ಕಾಯುವ ಕಾರ್ಯ ಬಿಟ್ಟು, ಜನರ ಹಿತ ರಕ್ಷಣೆಯನ್ನು ಕಾಯುವ ಕಾರ್ಯ ಕೈಗೊಳ್ಳುವರೆಂದು ತಿಳಿದಿದ್ದವರಾರು? ಅದು ಮೈಸೂರಿನ ಭಾಗ್ಯ. ಅವರ ಸುಕೃತ.

